# ರಾಗಾನುರಾಗಿಣಿ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
ಕಡಿದಾಳ್ ನಿಲಯ, 359, 14ನೇ ಅಡ್ಡರಸ್ತೆ
ಸದಾಶಿವನಗರ, ಬೆಂಗಳೂರು - 560 080

# ರಾಗಾನುರಾಗಿಣಿ

ಮಲ್ಲಿಕಾ

ಯಸ್ಮಿನ್ಸರ್ವಂ ಯತಸ್ಸರ್ವಂ
ಯಸ್ಸರ್ವಂ ಸರ್ವತಶ್ಚಯಃ
ಯಶ್ಚ ಸರ್ವಮಯೋ ದೇವಃ
ತಸ್ಮೈ ಸರ್ವಾತ್ಮನೇ ನಮಃ

॥ ಶ್ರೀ ಶಿವಪಾದಾರ್ಪಣಮಸ್ತು ॥

# ರಾಗಾನುರಾಗಿಣಿ

ಮಲ್ಲಿಕಾ

ಲೇಖಕರು ★ ಪ್ರಕಾಶಕರು
ಲಕ್ಷ್ಮೀ ಪ್ರಕಾಶನ
೧೪ನೇ ಕ್ರಾಸ್, ಕಡಿದಾಳ್ ನಿಲಯ
ಸದಾಶಿವನಗರ, ಬೆಂಗಳೂರು- 560 080

## ಪರಿವಿಡಿ

# ರಾಗಾನುರಾಗಿಣಿ

ಬೃಹದ್ ಬ್ರಹ್ಮಾಂಡ ಕಾರ್ಯಕಾರಣೀಯ
ಸತ್ಯ ಸುಂದರ ವೈಖರಿಯಾ
ಅತ್ಯದ್ಭುತ ವ್ಯವಹಾರ ಯೋಜನೆಯಂ
ಅರಿಯಲಾರದಾ ರಸಹೀನ ದೃಷ್ಟಿಯಲಿ
ಬೆಳಕು ಇದ್ದರೇನು? ಇಲ್ಲದ್ದರೇನು ಒಡೆಯಾ?
ಅಸುಂದರ ವಸ್ತು ನಿತ್ಯ ಸುಂದರಮಲ್ತೆ
ರಸಪೂರ್ಣ ದೃಷ್ಟಿಯ ವಿಶ್ಲೇಷಣೆಗೆ
ಜಡ- ಚೇತನ
ಚೇತನ- ಜಡ
ಜಡತೆಯಲಿ ಚೇತನವಂ ಕಾಂಬ
ಕಲಾತ್ಮಕತೆಯ ಮಹತ್ತರಂ!
ಚೇತನದಾಂತರ್ಯದಿಂ ಜಡವಂ ಹೆಕ್ಕಿ ತೆಗೆವ
ಜೀವಸೋತ್ಕರ್ಷತೆಯ ಪರಮ ಚಿಂತನಂ!
ಅನಾದಿಯಿಂ ಧೀರಶಕ್ತಿಯ ಗುರಿಯಾಗಿರ್ದೊಡಂ
ಅಂದಿಂದಿಗೂ ದಿವ್ಯ ಚೇತನದ ಗುಡಿಯಲಿ
ಜಡಮೂರ್ತಿ ಪ್ರತಿಷ್ಠಾಪನೆಗೊಂಡುದುದು
ಆಶ್ಚರ್ಯ ಮಾತ್ರಮಲ್ತು,
ವಿವೇಚನಾಕಲ್ಪಕ್ಕೊಂದು ಸವಾಲು ಕಣಾ!
ಕಣ್ಣಿರ್ದ ಕುರುಡರಾ ಸಂತೆ ಈ ಜಗ ತಿಳಿಯೋ!
ಕುರುಡಂ ಕುರುಡಂಗೆ
ಮಾರ್ಗದರ್ಶಿಯಾದೊಡಿದಲ್ತೆ ಪರಿಪಾಡು ಎಂದೆಂದಿಗೂ?
ಧೀಶಕ್ತಿಯಿರ್ದು ವಿವೇಚನಾ ಶೀಲತೆ
ಇಲ್ಲದಿರೆ ಎಲ್ಲಿಯ ಮಾನವೀಯತೆ ಪೇಳಾ?

ಸುಖ-ದುಃಖ-ರೋಗ-ರುಜಿನಗಳ
ಒಕ್ಕೂಟವಮಾದೀ ನವಜೀವನ ಸಂಸ್ಕರಣಂ
ಮಹಾ ಸ್ವಾರ್ಥ ಸಾಧನೆಯಾ ಬಟ್ಟೆಯಲಿ ನಡೆದಿದೆ ನೋಡಾ!
'ಚೆನ್ನಿಗನ ಅಸು ಅಳಿಯೆ ಹೊರಗೆ ಹಾಕುವರು'
ಎಂದ ದಾಸರ ಕಂಠ ಶೋಷಣೆಯಿಂದಾವ ಫಲವೈ
ಸಂಜೀವನ ಶಾಶ್ವತವಂ ಬಯಸಿ
ಲೋಕದ ಕಣ್ಣಿಗೆ ಮಣ್ಣೆರಚಿ
ಸುಖ ಸೌಕರ್ಯಕ್ಕಾಗಿ ಕಟ್ಟಿದ ಕನಸಿನ ಗೋಪುರ
ಹಂತ ಹಂತವಾಗಿ ಮೇಲೇರಿದೊಡಂ
ನಮ್ಮೀಮನಗತಿಗೆ ನಿಲುಕದವೊಲೊರ್ಮೆ
ಕುಸಿದು ಭೂಗತಮಾವುದು ನಿತ್ಯಸತ್ಯಂ!
ಆದೊಡೇಂ ಒಡೆಯಾ?
ಜೀವನದಾಳಮಂ ಕಂಡರಿಲ್ಲ;
ಬದುಕಿನಲಿ ಮಹೋದ್ದೇಶದ ಬಿತ್ತವಂ ಊರಿದರಿಲ್ಲ;
ಅಬೋಧರಿಂಗೆ ಅರುಹುವ ಹುರುಪಂತೂ ಇಲ್ಲವೇ ಇಲ್ಲ.
ಎನಲ್ ಸಾಲ್ಗುಮೇ ಬಣ್ಣನೇ?
ಅಲ್ತಲ್ತು.
ಇಂತಪ್ಪ ಕಾಲಗತಿಯಲಿ
ಲೋಕ ಸಂಮೃದ್ಧಿಯಾ ವೈಶೇಷಿಕ ಸಂದರ್ಭದಲಿ
ಜಡನಿದ್ದೆಯ ಸೋಮಾರಿತನವಂ
ಮೈಗೂಡಿಸಿಕೊಂಡ ನರರೂಪೀ
ನಿರ್ಬೋಧ ನಾರಾಯಣಂಗೆ ತಿಳಿವ ಕಲಿವ
ಮನವುಂಟೇನ್ನೈ?
ಕಾಮ-ಕ್ರೋಧಗಳ ಆಳಾಗಿ
ವಿವೇಚನೆಯೆತ್ತರಕೆ ದೂರಾಗಿ

ಪಶುತ್ವವಂ ಒಮ್ಮನದಿಂ ಮೈಗೊಂಡು
ಕಸಕ್ಕಿಂತ ಕಡೆಯಾಗಿ
ಬಾಳಿ ಬದುಕುವ ತೋಷಾತೋಷಿಗಳಿಂಗೆ
ಪೇಳುವುದೇನ್ನೈ
ಇಂತೀ ಜೀವನ ಸ್ಥರದಲಿ ಮೂದಿನದಾ
ಬಾಳು-ಬದುಕು ಸ್ವಚ್ಛಂದ ಗತಿಯಾ ಜಲದಾರೆಯೊಲ್
ಹರಿಯಲೀ ಧರೆಯಲಿ ರಾಗಾನುರಾಗಿಣಿಯಾಗಿ!
ಕವಯಿತ್ರಿಯ ಹೃನ್ಮನಂ ಅರಳಿಸುವಂದದಿ ಕೊನೆವರಂ!!

— o —

# ಮಹಾಂಬೋಧಿ

ಭೋರ್ಗರೆದು ಉರುಳುರುಳಿ ಹೊರಳಾಡಿ ಮುನ್ನುಗ್ಗಿ
ಬಂಡೆ ಬಂಡೆಯಿಂ ಪಾಯ್ದು ತೀರತೀರಗಳಂ
ಅವ್ವಳಿಸಿ ಒಳಗೊಳಗೆ ಸುಳಿಸುತ್ತಿ ಸುಳಿದಾಡಿ
ಭೋರನೆಳ್ದು ಬೋಂಕನಿಳ್ದು ನೊರೆನೊರೆಯಪ್ಪಿ
ಮಣಿಯಾಗಿ ಮುತ್ತಾಗಿ ಮೆರೆವ ಸನೀಲವಸನೆ
ಹೇ, ಶಾಂತೆಸುಶಾಂತೆಪ್ರಶಾಂತೆ ನೀಲಾಂಬೋಧಿ!
ನಿಚ್ಚ ವೀರರಸ ಸಂಗೀತೆ ಮಿಂಚಿನ ಕಂಚಿನ
ಹೊನ್ನಿನ ರವಿ ಶಶಿ ತಾರಾನಿಕಾಯ ಪ್ರಭಾಸೆ!
ಪಣಕ ಪಣಕೆನೆ ಮೀಂಗಳಾಡುತಿರೆ ಒಡಲಿನೊಳ್
ಹಡುಗುಪಡೆ ಮೈಕೀಸುತಿರೆ ಗರಗಸದವೊಲ್
ಮತ್ತಮಾ ಮೀಂಗಳಿಗೆರಗುವ ಹಕ್ಕಿಪಕ್ಕಿಗಳ ಮೇಣ್
ಬೇಂಟೆಗಾರರ ಘೋರ ಉಪಟಳಂ ಮೇರೆಯಂ
ಮೀರ್ದುದಲ್ತೆ? ಹೇ, ಜನನಿ ಭಾರತ ನೀಲಾಂಬೋಧಿ!
ನಿತ್ಯ ಸಂಯಾತ್ರೆಯೊಳ್ ಜಸಕನೆ ಮಸಗಿ ಮಸಗಿ
ಹೊಸಗಿ ಹುರುಪೆತ್ತು ರೋಷದ ತೋಷದ ಹುಮ್ಮ
ಬಿಮ್ಮಿನ ಭಜನ ವೈಖರಿಯ ಮೃದು ಮಂದ ಮಂಜುಳ
ಗಾನ ಪ್ರಮತ್ತತೆಯಾ ನಿರ್ವೇಲಲೋಕವೆ!
ನಿತ್ಯದೇಕಾಗ್ರತೆಯ ನಿರಾಮಯ ನಿಷ್ಕಳಂಕ-
ದೇಕಾಂತ ನಿರ್ವೇದ ನಿರ್ವ್ಯಸನರೂಪಿ ನಿಜ
ಮಾತೃಕೆ! ಹೇ ಪರಮಾನಂದ ಸತ್ಯಸ್ವರೂಪಿಣಿ!!
ಯುಗಯುಗಯುಗಗಳ ಸಂಯಾತ್ರಿ; ಕಲ್ಪತಲ್ಪಗಳ
ಸಂಯೋಜನಾ ಮೈತ್ರಿ : ಸಕಲ ಅಣುತೃಣಗಳ
ಕೃಪಾಪೋಷಿಣಿ! ಹೇ, ಘನ ಘೋರ ತಪೋರಾಶಿಯೆ!

ನಿನಗಣಂ ಎಣೆಯಿಲ್ಲ; ನಿನಗಣಂ ಸೋಲಿಲ್ಲ;
ನಿನಗಣಂ ಬೇಸರಿಲ್ಲ; ಚಂದ್ರಶೀಲ ಶೀತಲೆ!
ನಿನ್ನೊಳ್ ಒಡಕಿಲ್ಲ; ಬಿರುಕಿಲ್ಲ; ಹೊಲಸಿಲ್ಲ.
ಏಗಳುಂ ಬೆಬ್ಬಳಿಸಿ ನುಗ್ಗುವ ನಲ್ಗನ್ನಡಿಯೇ!
ಸಂಧ್ಯಾಲೋಕದ ಶೋಣಿತ ಶೋಭಾ ಶೈಲಿಯಂ
ಮೈಗೊಂಡು ಕೆಂಗಲಿಸಿ ರಂಜಿಪ ಸುವರ್ಣ ನಿಧಿಯೇ!
ಮೇಣ್ ಚಂಡ ಪ್ರಚಂಡನೆನೆ ಝಂಝಾವಾತಂ
ಜಡಿಕುಟ್ಟಿ ಬೀಸಿಬರೆ ನೆರೆಯೇರಿ ಭುಗಿಲೆಳ್ದು
ಉಲ್ಲೋಲಕಲ್ಲೋಲ ಅಲೆಗಳಿಂ ಭೋರೆಂದು
ಮುನ್ನುಗ್ಗಿ ಮೇರೆ ಮೀರ್ದು ಪರಿಸರಮಂ ಕೊಚ್ಚಿ
ಊರು ಕೇರಿಯಂ ತೊಳೆದು ಜವರಾಯನೆನೆ ಘನ
ಪಾಶವೊಗೆದು ಉತ್ಸುಕದಿಂ ಪ್ರಾಣಿಕೋಟಿಯಾ
ಜೀವನಹರಣಗೈವ ಭೀಷಣೋಲ್ಲಾಸಿನಿಯೆ!
ನಿನ್ನದ್ಭುತ ಗರ್ಭದಲಿ ರತ್ನಾಳಿ ಸಸ್ಯಾಳಿ
ಜೀವಾಳಿಗಳ ಮಹದ್ ಲೋಕಮಂ ನಿರ್ಮಿಸಿಹೆ
ಹೇ, ಲೋಕ ಕಲ್ಯಾಣಿ! ಭಾರತ ಮಹಾಂಬೋಧಿ!
ಮತ್ತಿದೇಂ ಒಳಗೊಳಗೆ ನರಳುತಿಹೆ, ಹೊರಳುತಿಹೆ,
ಗುಳುಗಾಡುತಿಹೆ ಮೇಣ್ ಸುಳಿಸುತ್ತುತಿಹೆ ಇದೇಂ
ಉದ್ರೇಕದುಬ್ಬರಮೋ? ಸಮುಲ್ಲಾಸದ ರುದ್ರ
ಖೇಲನಮೊ? ಮತ್ತಾವ ಬನ್ನ ಭಂಗದ ಬವಣೆಯೊ?
ಮೇಣ್ ಸಂಚಿನ ಮಿಂಚಿನ ಕಾರ್ಯದ ಹೊಂಚಿಕೆಯೊ?
ಪೇಳ್, ಮುನಿಯದೆ ಮನಂಗೆಡದೆ ಮುನ್ನುಗ್ಗದಿರ್ದೊಡೆ
ಜಗದ ಹರಣ ರಕ್ಷೆ ಮೇಣ್ ಸರ್ವತ್ರ ಶಾಂತಿ ರಕ್ಷೆ!
ನಿನ್ನಗಲಕೆ ಮಿತಿಯಿಲ್ಲ; ನಿನ್ನಾಳಕೆ ಎಣೆಯಿಲ್ಲ.
ಎನಿತೆನಿತು ನದಿಗಳ ಹೀರಿ ಗಾವುದ ಗಾವುದ ಹಬ್ಬಿ

ನೋಟಕೆ ಸಿರಿಯಾಗಿ ಬದುಕಿಗೆ ಆಗರಮಾಗಿ
ಲೋಕೋಚಿತ ಸಾಹಿತ್ಯಮಾಗಿ ರಾಜ್ಯ ರಾಜ್ಯಗಳ
ಅನುಬಂಧಮಾಗಿ ಧುಮುಧುಮಿಸುತಿಹೆ; ಹೇ, ಮಾನಿನಿ!
ನಿನಗಣಂ ಆ ರಾಜ್ಯವೀರಾಜ್ಯ ಎಂದೆಂಬ
ಭೇದಮಿನಿತಿಲ್ಲಂ : ಸದಾ ನಿರ್ವೃತ್ತಿಯಾಮೋದಂ
ನಿನ್ನೊಡಲ ಗಹ್ವರದಲಿ ಹೇ ರೂಪ ಮಾಧುರಿಯೆ!
ಏಗಳುಂ ಧುಮುಧುಮಿಸುವ ಅಲೆಯೋಳಿ-ಅಲೆಯೇರಿ
ಅಲೆಯಿಳಿದು ಮೇಲಾಯ್ದು ಮುನ್ನುರ್ಗಿ ಭೋರ್ಗರೆದು
ಒಂದರೊಡನೊಂದು ಸ್ಪರ್ಧಿಪ ಸುನೀಲಲೆಯೋಳಿ!
ಪೊನ್ನೇಸರ ಪೊಂಗಾಂತಿಗೆ ಪ್ರತಿ ಜ್ವಲಿಸುವ
ಮಿಂಚು ಮೈಯಿನ ಮೀಂಗಳ ಚೆಲುವಿನ ಹೇರಾಶಿ!
ಬಗೆವಗೆಯ ಚರಾಚರಗಳ ಮಹಾ ಭಂಡಾರ
ವೈಖರಿಯ ಭೀಮ ಭೀಷಣ ಪ್ರಚಂಡೋನ್ಮಾದಿನಿ!
ತಹತಹಿಸಿ ಜಗಜಗಿಸಿ ಲವಣರಾಶಿಯ ನಾದಿ,
ಪ್ರಚಂಡವೇಗದಿ ಪ್ರಚಂಡ ಭಾವದಿ ನಿಚ್ಚ
ಸತ್-ಚಿತ್-ಮೃತ್ ಶ್ವಾಸನಿಶ್ವಾಸ ಸಮುಲ್ಲಾಸಿನೀ!
ಸಕಲ ಜೀವಕೋಟಿಯ ಜೀವನೋತ್ಕರ್ಷತೆಯಾ
ಭೀಷ್ಮ ಪ್ರತಿಜ್ಞಾ ಪರಮಜ್ಞಾನ ಮೋದಿನೀ!
ನೀನಲ್ತೆ ಜಗನ್ಮೋಹಿನಿ? ಮೇಣ್ ಮನೋಲ್ಲಾಸಿನಿ!
ಮೇಣ್ ಭಾವ ಗಂಭೀರ ಸತ್ಯ ಮಾಧುರಿ! ಮೇಣ್
ಸಕಲೈಶ್ವರ್ಯ ಪ್ರದಾಯಿನಿ! ನಮೋ ನಮೋ
ಭಾರತ ಮಹಾಂಭೋಧಿ!

— ೦ —

# ಮಹಾತ್ಮಾ ಗಾಂಧೀಜಿ

ಪೊಳ್ತರೆಯ ಎಳೆನೇಸರ್ ಬಾಂದಳವನೇರ್ವ
ಮುನ್ನ ನುಡಿಗಾರ ವೀಥಿಯೊಳ್ ಡಿಂಡಿಮವ
ಡಮಡಮಿಸಿ ಹುರುಪಿನಿಂ ''ಕೇಳಿರೈ, ಕೇಳಿರೈ!
ಪುರಜನರೇ! ಬೈಗಿನಲಿ ಪೊಳ್ತು ಇಳಿಯುವ ಮುನ್ನ
ಇಲ್ಲಿಗೈತರಲಿರ್ಪ ರಾಷ್ಟ್ರಪಿತ ಮಹಾತ್ಮ
ಗಾಂಧೀಜಿ ಜನತತಿಗೆ ಕೆಲವಾನು ಹಿತವಚನ
ಪೇಳಲಿರ್ಪರ್. ಆರಾರೂ ಪಿಂದುಳಿಯದೆ ಹೊರ
ಸಭೆಗೆ ಬರಲಕ್ಕು! ಕೇಳಿರೈ ಎಲ್ಲ ಜನರೇ!''
ಎಂದುಮೆಂದು ಮತ್ತೆ ಮೇಣ್ಮತ್ತೆ ಏರು ದನಿಯೊಳ್
ಕೇಳಿಸಿದನ್ ಊರಿನ ಕಾರ್ಯಕರ್ತರಪ್ಪಣೆ
ಭಾರಮಂ ತಾಂ ಶಿರದೊಳೊಪ್ಪಿ
ಓವೋ! ಎಂತು
ಮೆಂತು ಸಂದುದೊ ಸಮಯಂ? ಸುಡು ಬಿಸಿಲಿಳಿವ ಮುನ್ನಮೆ
ಎಳೆಎಳೆಗಳಂ ತರುಬಿ ಪೊಸೆದು ಸೇರಿಸಿದವೊಲ್
ಜನತತಿ ನೆರೆಯಲಾ ಬಟ್ಟಬಯಲೊಳ್, ಕಿರುದಾಣ
ಕಿಕ್ಕಿರಿದು ತುಂಬಿದುದು ಉಸಿರ್ಗಟ್ಟುವ ತೆರದಿ
ಅದೇಂ ಮಂತ್ರಶಕ್ತಿಯೊ? ಜಗಜಾಗೃತ ಜಂಕಣೆಯೊ?
ಎಂದಚ್ಚರಿ ಬಡುವೊಲ್ ಕಣ್ಮನಗಳ್ ನೆಟ್ಟುದು
ಅಶ್ವತ್ಥ ವೃಕ್ಷದ ಕಿರುಕಟ್ಟೆಯೊಳ್, ಆವುದೊ
ಗುರುತ್ವಾಕರ್ಷಣೆ ಸೆಳೆದೊಲ್ ಕಣಾ! ನಿಜಪೊಳ್ತು
ಸಾರಿಬರೆ ಅಲ್ಲಿಗೈ ತಂದರಾ ಗಾಂಧೀಜಿ
ತಮ್ಮ ಅನುಯಾಯಿಗಳೊಡಂ. ಎಪ್ಪತ್ತರ ಹರೆಯ,
ಬೋಳುತಲೆ, ಬೊಚ್ಚುಬಾಯಿ, ತಾಮ್ರವರ್ಣ; ಬಡಕಲ

ಮೈಗೆ ಮುಂಡು ಧೋತರ, ತುಂಡು ಚದ್ದರದ ಉಡಿಗೆ,
ಮೇಣ್ ಅಂದ ಚೆಂದರಹಿತ ಉದ್ದನೆಯ ಬಿದಿರು
ದೊಣ್ಣೆಯೊಂದವರ ಊರುಗೋಲು ಕಣಾ! ಓವೊ,
ಇಂತಪ್ಪ ಅಚ್ಚರಿಯನೇನನೆಂಬೆ? ಮನದೊಳ್
ಜಾನಿಸೈ ಗೆಣೆಯ! ರಾಜಾಧಿರಾಜ ರೈಸಿರಿ
ಇನಿತಿಲ್ಲ; ನವಜನರ ಡಾಂಭಿಕತೆಯಂತೂ
ಇಲ್ಲವೇ ಇಲ್ಲವೈ; ಮೇಣವರ ಪ್ರವಚನದ
ಹುರುಳರಿವ ಜಾಣ್ಮೆಯೀ ಜನರ್ಗಿದೆ ಎಂಬೆಯಾ?
ಅದೂ ಸಹ ಇಲ್ಲವೆನೆ ನೀ ತಿಳಿಯ ಶ್ರದ್ಧಾಳು!
ಅಂತುಮಿಂತಿದೆಲ್ಲಂ ಕಣ್ತುಂಬ ನೋಡಿದೊಡೆ
ಲೋಕದೊಕ್ಕೊರಲ ಕರೆ 'ಮಹಾತ್ಮ' ಎಂದೆಂಬ
ದೇವತ್ವದೀಕ್ಷಣೆಯೆ ಈ ಪರಿ ಜನ ಸಂದಣಿ
ಸಂಘಟಿಸೆ ಕಾರಣಮೆ? ಅಲ್ತಲ್ತು,
ಮಿನ್ನೆ ಭಕ್ತಿಯಿಂ
ಪೂಜಿಸಲ್ ವೇದ ಪ್ರತಿತ ರಾಮಕೃಷ್ಣಾದಿ
ದೇವಪುರುಷರಿರ್ದರ್. ರಾಜತ್ವವಂ ಒಪ್ಪಿ
ದೇವತ್ವಕೇರಿಸಿ ಭಯ ಭಕ್ತಿಯಲಿ ಪೂಜಿಪ
ಕಾಲಮಿರ್ದುದು. ಅಧಿಕಾರದರ್ಪದಾಣ್ಮೆಗೆ
ಮಣಿದು ಕೈಮುಗಿವ ಲೋಗರಿರ್ದರ್. ಸಿರಿತನಕೆ
ಬಾಯ್ಬಿಟ್ಟು ಕಾಲ್ವಿಡಿವ ಷಂಡಭಂಡತನಮಂತು
ಕೊರಮಿಲ್ಲಮೆನೆ, ಇಂತಪ್ಪ ಮನುಕುಲದುದ್ಧರಣಂ
ಮನದೊಳಿಟ್ಟು ಜೀವನವ ಲೆಕ್ಕಿಸದೆ ದಿನದಿನ
ಭಂಗ ಬವಣೆಯ ದಳ್ಳುರಿಯಲಿ ಬೇಯುತ ಜಾನ
ದೀವಿಗೆಯಂ ಬೆಳಗೆ ಹೋರಾಡಿ ಸಂದುಹೋದ
ಯೇಸುಕ್ರಿಸ್ತ, ಬುದ್ಧ, ರಾಮಕೃಷ್ಣ, ವಿವೇಕ

ಬಸವರಾದಿ ದೇವಮನುಜರೆಲ್ಲರ ಗೌರವ
ಪೂಜ್ಯತೆಗಳಂ ಮೀರ್ದು ಮುಂಬೆಳೆದುದೀ ನೂತನ
ಋಜುದೃಷ್ಟಿ ಮನಃಚಿತ್ತ ವಿಕಸನದಿಂ ಕಣಾ!
ಅಮಮ! ಇಂತಿದಕೆನಿತು ಕಾಲಮಾನ ಸಂದುದೊ
ನೀ ಭಾವಿಸಿ ನೋಡಾ, ಜ್ಞಾನದಾಹಕಿಂತಲ್
ಭಂಗ ಬವಣೆಗಳ ಕೋಟಲೆಯ ಕೋಟೆಯೊಡೆವಾ
ಹುರುಪು ಹುಮ್ಮಸ್ಸುಗಳೆ ಜ್ಞಾನದೇಳಿಗೆಯಕ್ಕು,
'ಅಸಂತೋಷಂ ಶ್ರೀಯೋರ್ಮೂಲಂ' ಎಂದುದು ವೇದ.
ಅಂತುಮೀ ಕಲಿಕಾಲ ಧನ್ಯಂ! ಮನುಕುಲ ಧನ್ಯಂ!

—೦—

# ಸೃಷ್ಟಿಯುತಿ ಘೋರವೈಸಲೆ

ಪೊಳ್ತುರುಳಿ ತಣ್ಪು ತಳೆದು ಅತಿ ಸಂಭ್ರಮದಿಂ
ಪ್ರಾತಃಮುಹೂರ್ತಮಡರಿಬರ್ಪಾ ಸಮಯದೊಳ್
ಸ್ವಪ್ನಲೋಕದರಮನೆಯ ಕದತೆರೆದು ಕಲಿಯೆನೆ
ಪೊರಗೈತರಲಾನು ಅನಂತ ಸೃಷ್ಟಿಯ ಮಹಾ
ವಿಸ್ತಾರದಿ ನಸುಕಿನ ಮಸುಗಾಂತಿ ನವಿರ್ದ್ದರೆ
ತೆರಂ ಪರ್ವಿ ಶೋಭಿಸಿರಲ್ ಚೇತೋಹಾರಿಯಾಗಿ,
ನಭನೀಲ ಲೋಕಾಂತರಿತ ತರದ ಬೆಳ್ಳಿ
ಚುಕ್ಕಿಗಳ್ ಬೆಳ್ನಗೆಯ ಸಿರಿಸೂಸಿ ಮಿಣಮಿಣನೆ
ಮಿನುಗುತೆರೆ ಶುಕ್ಲಪಕ್ಷದ ಪೂರ್ಣಚಂದ್ರಮನ
ಬೆಳದಿಂಗಳೊಡ್ಡೋಲಗಂ ಮುಗ್ಧ ಶೀತಲಂ!
ತ್ರೈಭುವನ ಸೌಂದರ್ಯ ಲಕ್ಷ್ಮಿಯಾ ಮೌನಸಿರಿ
ಧ್ಯಾನದೊಳ್ ವರಮುಹೂರ್ತಂ ಶಾಂತಪ್ರಶಾಂತಂ!
ಪಚ್ಚವರ್ಣಾಂತ ಸಸ್ಯದ್ರುಮ ಪರಿವೇಷ್ಟಿತ
ಸುರಮ್ಯೋದ್ಯಾನದಲಿ ಸುಗಂಧ ಮಧುರ ಸ್ಮೇರ
ಸುಮಸಮುಚ್ಚಯಂ ನಳನಳಿಸಿ ಹೃತ್ ಕರಂಡದಲಿ
ತುಂಬಿ ಕೋಡಿವರಿವನಿತು ಸುಖಪ್ರವಿಷ್ಟಂ!

ಮತ್ತಾಗಳುಂ ಚಕಿತ ಮುಗ್ಧ ಚಾರಣರುಲಿಯ
ಕಾಜಾಣ ಕೋಗಿಲೆಗಳೆಚ್ಚೆತ್ತು ಅಲೆದುವಯ್
ಮರದಿಂ ಮರಕೆ ಅರೆನಿದ್ದೆಯಾ ಮರ್ಬಿನಲಿ ಓವಾ
ಸ್ಮೃತಿ-ಶ್ರುತಿ ವಿಲಯ ಚರಿತವಂ ಜುಗುಳ್ವಂತೆ!
ಅದೆವೊಳ್ತಿನೊಳ್ ಮನದ ಬೆಮೆಯುಂ ಕರಗಿ ಮುಂಬೆಳಕು
ಮಿದಲ್ಲೆಂದು ಮತ್ತೆ ಹಿಮ್ಮರಳಿದುವು ರೆಕ್ಕೆಯಂ
ಬಿದಿರ್ಚಿ ಪಟಪಟಿಸುತ ತಮ್ಮತಮ್ಮ ಗೂಡಿಗೆ.

ನಿಶೆಯುರುಳಿ ಮೂಡುವೆಟ್ಟಿನ ಮೇಗಡೆ ಸುನೀಲ
ಭಿತ್ತಿಯಲಿ ಸ್ವರ್ಣಕಲಶದಿಂ ಚೆಲ್ಲಿದ ಕನಕ
ವಾರಿಯೊಲ್ ಮುಂಬೆಳಕು ಮಿಂಚಿಬರೆ ನಿಡುರಾತ್ರಿ
ಸಂದ ಕಾರ್ಯಕಾರಣಮೊ ಎನಲ್ಕೆ ಮಿಂಚಿನೊಲ್
ಬೆಳ್ಳಿ ಚುಕ್ಕಿಗಳ ಸಹಿತ ಪೂರ್ಣಚಂದ್ರನಂ
ಗುಡಿಸಿ ಝಾಡಿಸಿ ತೆಗೆದೊಗೆದವೊಲ್ ಅರೆಚಣದೊಳ್
ಕಣ್ಮಾಯಮಾದುವು ಲೋಕಾಂತರಂಬೊಕ್ಕು! ಅಹ,
ಪ್ರಾತಃಸಮೀರಣಂ ಒಯ್ಯೊಯ್ಯನೆ ಶೀತಲ
ಸುಖ ಸ್ಪರ್ಶಮಂ ನೀಡುತ್ತೈತರೆ ಮನಂ ಘನಿಸಿ
ಮಥಿಸಿ ಸತ್-ಚಿತ್ ಧ್ಯಾನ ಮುದಿಸಿ ತವದರ್ಶನದ
ಆಕಾಂಕ್ಷೆಯೊಳ್ ಮುನ್ನಡೆದೆ ಸೃಷ್ಟಿಸೌಂದರ್ಯ
ರಾಶಿಯೊಳ್ ನುರ್ಗಿ; ಅಹ, ಶಾಶ್ವತವನರಿಯಲ್ಕೆ
ನಸ್ವರವನು ಭೇದಿಪ ಕವಿಸಮಯ ಸ್ಫೂರ್ತಿಯಲಿ
ಕಬ್ಬಕನ್ಯೆಯ ಕಟ್ಟುವೆಗ್ಗತನದೊಳುರ್ಬಿ
ಮುಂಬಕ್ಕಿ ಕಂಠಕೃತನಾನಾವಗೆ ಸ್ವನಂ
ಸ್ವರ ಬುಗ್ಗೆಯೊಲುಣ್ಮಿ ಸುಪ್ರಭಾತಂ ಮೊಳಗುತಿರೆ
ಘನಾರಣ್ಯ ನಿಬಿಡ ಸಸ್ಯರಾಜಿಯ ಪತ್ರಗಳ್
ಮರ್ಮರಿಸಿ ಶ್ರುತಿಮೀಂಟುತಿರೆ, ಬಾಲಕೋಮಲ
ದಿನಮಣಿ ಕನಕಕಾಂತಿಯಂ ಚೆಲ್ಲಿ ಪೆರ್ಮ್ಮಗಿಲ
ನೇರ್ದು ಪ್ರಾತಃಪ್ರಕೃತಿ ವೈಭವ ಮೆರೆದುದೈ
ನೋಳ್ಪಕಣ್ ಧನ್ಯಮಪ್ಪಂತೆ! ಸುತ್ತಮುತ್ತಣ
ದೃಷ್ಟಿಕಕ್ಷೆಯಲಿ ಕಣ್‌ನೆಟ್ಟು ಮನಮಂಡಲದಿ
ಸಂತೃಪ್ತಿಯಂ ತುಂಬಿ ನಡೆದೆ ನಾನೇಕಾಂಗಿ
ಸೃಷ್ಟಿಲೀಲೆಯಲಿ ಇರುವೆಯಂ ಹೋಲಿ!
ಎಲ್ಲೆಡೆ
ಮುಂಗಾರ್ಮಳೆ ಸುರಿದು ಬನಸಿರಿ ಪಚ್ಚಕಡಲೆನೆ

ಪಸುರಪ್ಪಿ ಅಲೆಯಲೆಯ್ಯೆಸಿ ದಶದಿಶೆಗಳಿಂಗೆ
ಪರ್ವಿದಾ ಸೊಬಗಿನ ರಸನೆಯನೀಂಟಿ ಕಣ್ಗೊಳ್
ಫಳಕ್ಕನೆ ಸುಖಾಶ್ರುಗಳ್ ತುಂಬಿದುವು, ಓವೋ!
ನೋಡಿದನಿತು ಸಾಲದ ಪ್ರಕೃತಿಯೈಸಿರಿ ಮನ
ಮಂಜರಿಗೆ ಹಾಲಾಯ್ತು; ಜೇನಾಯ್ತು; ಇನಿಗೊರಳ
ಪಕ್ಷಿಯಿಂಚರ ಕಿವಿಗೆ ಹಬ್ಬವಾಯ್ತು; ಜಳಜಳ
ಪರಿದೋಡುವ ಪುಣ್ಯಸಲಿಲಂ ಜಿಹ್ವೆಗಾಯ್ತು
ಮಧುರ ರಸನೆ; ಚಿಂತನೆಗಾದತ್ತು ತ್ರಿಲೋಕ
ಸೃಷ್ಟಿಯೀ ಬೃಹತ್ತಮ ಕೌತುಕಂ! ನೋಡಲೇಂ
ವನದೇವಿಯರಮನೆಯೊ? ನಿಸರ್ಗದೊಡೆಯನ
ಒಡ್ಡೋಲಗಮೊ? ರಸಋಷಿತಪೋವನಮೊ? ಮೇಣ್
ಸಗ್ಗಿಗರ ಸಿರಿನಾಡೊ? ಎಂದೆಂಬ ಬೆಮೆಯಣಂ
ಮೂಡಿಪವೊಲ್ ಕಣ್ಮನಗಳಂ ತಿವಿಯುತಿರ್ದುದು
ಆಯಸ್ಕಾಂತದವೊಲ್! ಬನಗಾಳಿಯನಡರಿ
ತೇಲ್ವಂತೆ ತನುಮನಂ ಹಗುರಾಗಿ ಹಸುರಾಗಿ
ಸೊಬಗಿನಾಲಯದಲಿ ನಲಿಯುತಿರೆ, ವನಪಥದೊಳ್
ಕಂಡೆನೊರ್ವ ಮುದ್ದು ಮೊಗದ ನಲ್ ಕುವರಿ ತನ್ನ
ಕೈಯೊಳ್ ಕುರಿಮರಿಯಂ ಎತ್ತಿಕೊಂಡಿತ್ತಲೇ
ಬರುತಿರ್ದುದಂ. ಒಡನೆ ಸಾರ್ದವಳ ಬಳಿಗಾನು
ಎಳೆಮೊಗವ ನೋಡುತ ಮನತುಂಬಿ ಸಂತಸಂ
ಬಟ್ಟು ಕೈಹಸ್ತಮಂ ತಲೆಯೊಳಿರ್ಕಿ ಕೇಳ್ದೆಂ
''ಎಲೆ ಬಾಲೆ ಆರದೀ ಮಿರುಮೃಗ ಶಾಬಕಂ?''
ಆದರ್ಕಾ ಮುಗ್ಧೆ ಮುದದಿಂದಲಿ ತಿಳಿನಗೆಯಂ
ಸೂಸಿ ''ತಿಂಗಳ ಎಳೆಮರಿಯಿದೆಮ್ಮದು'' ಎಂದಳ್
''ಈಗಳಿದನೆಲ್ಲಿಗುಯ್ವೆ ಮಗುವೆ?'' ಎನಲ್ಕಾನು

''ಕುಟಿಗುಯ್ಯಲಕ್ಕು. ತುಂಟಮರಿ ನಿಂತೆಡೆಯೊಳ್
ನಿಲ್ಲದು ಚಣಂ! ಇಂತು ಕಾಡಿನತ್ತ ಜಗಿದೊಡೆ
ತೋಳಗಳ ಪಾಲಲ್ತೆ?'' ಎಂದಳಾ ಬಾಲೆ ನಸು
ಕಳಕಳಿಯ ದನಿಯೊಳ್. ಅಹಃ, ಮುಗ್ಧದುಗ್ಧ ಮಗು
ಎಂತರಿವಳ್ ತಮ್ಮವರೆ ಅದರ ಪಾಲಿಂಗೆ ಪೆರ್
ತೋಳಗಳ್ ಎಂಬುದಂ? ಎನಿಸಲ್ ಮನದಿ ನೊಂದು
ನೀರಾಗಿ ಮರುನುಡಿಯದೆ ಮಿಣ್ಣನಿರಲ್ ಎರ್ದೆ
ಗುಂಡಿಯೊಳ್ ನರಳ್ದ ಬಿಸುಸುಯ್ಲು ನಿಃಶಬ್ದ
ಸ್ಥಿತಿಯಲಿ ಹರಿದಾಡಿತು ತಾನೇ ತಾನ್ನೈಸಿ!
ಬಾಲೆ ಮರಿಯಂ ನೇವರಿಸಿ ಮುದ್ದಿಸುತ ತನ್ನ
ಮನಕೆ ಅಮಿತಾನಂದಮಂ ತುಂಬಿಕೊಳ್ಳುತಲಿ
ನಡೆದಳಲ್ಲಿಂದ ಕಿರುಪಥವಿಡಿದು ಮನೆಯೆಡೆಗೆ.
ಸ್ವಪ್ನ ಖಗ ರೆಂಕೆ ಬಡಿದು ಬಿದಿರ್ಚಿ ನಭಕೇರ್ದು
ಕಾಜಾಣ ಕಾಮಳ್ಳಿಗಳೊಡಗೂಡಿ ಪಾರಾಡಿ
ವಿಯದ್ರಂಗವ ಸುತ್ತಿ ಸುಳಿದಾಡಿ ಕೈಲಾಸ
ಕುತ್ಕೀಲ ಶುಕ್ರ ಶಿಲೆಗಿಳಿಯೆ, ಓವೊ! ಪ್ರಕೃತಿ
ಸೌಂದರ್ಯಮಂ ಪೀರ್ದು ಮನತುಂಬಿ ಬಣ್ಣಿಸಲ್
ಶಕ್ಯಮೇ? ಅಹ, ಹಿಮವತ್ ಪರ್ವತ ಪ್ರದೇಶ
ಸೌಂದರ್ಯ ರಸಸ್ವಾದನೆಗೈದಿತಾತ್ಮನಿಧಿ
ಭ್ರಮರರೂಪಂಗೆತ್ತು! ಅಲ್ಲಲ್ಲಿ ಸುತ್ತಾಡಿ
ಮಧುರ ರಸ ಪಾನದಿಂ ಮುದವೆತ್ತು ಮದವೆತ್ತು
ಜಗಸೃಷ್ಟಿಯಲಿ ಬೆರೆದು ಕರಗಿ ನೀರಾಗೆ ತಾಂ
ಪರಮಾತ್ಮನಂ ಬೆರೆವವೊಲ್ ಸದ್ದಿಲ್ಲದುರುಳಿತು
ಸಮಯಂ. ಎಳೆನೇಸರ್ ಬೆಳ್ಮುಗಿಲ ರಾಶಿಯಲಿ
ಹೊಂಗಾಂತಿಯಂ ಸೂಸಿ ಮೇಲೇರ್ದುದು ವಿಶ್ವದ
ಸಿರಿಚಕ್ರದಿ ಸೆರೆಸಿಲ್ಕಿ. ತ್ರಿಲೋಕ ವಿಹಾರಿ

ಮಂದಮಾರುತಂ ಮೃದು ಮಂದ ಚಾಮರಮಂ
ಬೀಸಿ ವೀಸಿ ತಣ್ಪೆತ್ತುದು ಮನಃಪ್ರಾಣಗಳ್ ತಣ್ಣಗೆ
ತಣ್ಪು ತಳೆವನ್ನೆಗಂ ಮತ್ತಾಗಳ್ ನಿಸರ್ಗ
ದೈಸಿರಿಯಲಿ ಮನವಿಟ್ಟು ಕಣ್ತುಂಬ ನೋಡುತ
ಸೊಂಪುಂಡು ಬೆಟ್ಟನೇರಿ ತಿಟ್ಟನಿಳಿದು ಮತ್ತೆ
ಮುನ್ನಡೆಯೆ ದುಷ್ಟವ್ಯಾಘ್ರನಾವಾಗಲೊ ಗೃಹ
ಧೇನುವೊಂದಂ ಪಿಡಿದು ಕೊಂದು ಕರುಳಂ ಬಗೆದು
ಕೆನ್ನೆತ್ತರಂ ಪೀರ‍್ದು ತನುಬಿರಿಯೆ ಬಿರ‍್ದುಂಡು
ಪೋದ ಭೀಕರ ದೃಶ್ಯ ಕಣ್ಗೆಸೆದುದು ತನುಮನ
ನಡುಗುವಂದದಲಿ! ಉಚ್ಚಿಷ್ಟಂ ಇರುವೆ ಪರ‍್ದು
ಕಾಗೆಗಳಿಗಾದತ್ತು ಮಹದೌತಣಂ! ಎನಿತು
ಕ್ರೂರ! ಎನಿತು ಭಯಾನಕ! ಎಂದಳ್ಕಿ ದೂರಕೆ
ಜಿಗಿನೆಗೆದು ಆ ತಾಣಮಂ ಬಿಟ್ಟೋಡಿದೆನ್. ಮುಂದೆ
ಕಣ್ಗೆಸೆದುದು ಬಿತ್ತರದ ಗಂಗಾ ವಾಹಿನಿಯು
ದಾರಿಗಟ್ಟುವವೊಲ್. ಓವೋ! ಅಲೆಅಲೆಯೈಸಿ
ಮೇಣ್ ನೊರೆನೊರೆಯಪ್ಪಿ ಮತ್ತಮಾ ಮಣಿಮಣಿಯ
ಹನಿ ಮುತ್ತುಗಳೊಟ್ಟಿ ಕಲಕಲ ನಾದಂಗೈದು
ನಿತ್ಯಜಯಘೋಷದೊಡಂ ಮುನ್ನುರ್ಗುತ ನೋಳ್ಪ
ಕಣ್ಮನಕೆ ಸುಗ್ಗಿ ಸಂಪದಮೀವ ದೃಶ್ಯಮಂ
ಕಣ್ತುಂಬ ನಿಟ್ಟಿಸುತ ನಿಂತೆನಲ್ಲಿ ಮೈಮನ
ಮರವಟ್ಟು. ಅಹ, ಸಂದುದು ಹಲಕೆಲ ಚಣಂ ಅತಿ
ಆಮೋದದಾವೇಶದಲಿ. ಅರೆರೆ! ಮತ್ತಿದೇಂ?
ನೀರೊಳಗೊಳಗೆ ಗುಳುಗುಳುಗಾಡಿ ಜಲಕೇಳಿಯ
ಸುಳಿಚಕ್ರ ಗಿರ್‌ಗಿರನೆ ಸುತ್ತುತೆರಂ ಪೇರ್
ಸುಳಿಯೊಂದು ಸುತ್ತಣ ಸುಳಿಗಳೋಳಿಯಲಿ ಸಿಲ್ಕಿ
ಪೊಯ್ದಾಡುತಿರಲ್ ಅತ್ಯದ್ಭುತ ವಿಚಿತ್ರವಂ

ಕಂಡು ಬೆಕ್ಕಸ ಬೆರಗುವಟ್ಟು ನೋನೋಡುತಿರೆ
ಪೇಳಲೇನದಂ? ನಸುವೊಳ್ತಿನೊಳ್ ಶೃಂಗಿಯಂ
ಕಚ್ಚಿ ಬಿಗಿವಿಡಿದ ಪೆರ್ ಮೊಸಳೆಯೊಂದು ಭೋಂಕನೆ
ತಲೆಎತ್ತಲಾಗ ಜೀವಭಯದಿಂ ಒದ್ದಾಡಿ
ಸೆಣಸುತಿರ್ದ ಶೃಂಗಿಯ ಕಾರುಣ್ಯಪೂರ್ಣಮಾ
ಚಿತ್ರದಿಂ ನೆಲಕುಸಿದವೊಲಾಯ್ತು ಭಯ ಭೀತಿಯ
ಗಾವರಂ ಮನಂ ಮುಸುಗಿ ಹಾ, ಪ್ರಕೃತಿಯೆ! ನೀಂ
ಎನಿತೊಂದು ಸೌಮ್ಯಮೋ ಅನಿತೆ ಕೂರಮಲ್ತೇ?
ಆರಿಗಾರು ಈ ಜಗದೊಳ್? ಓರ್ವನೊರ್ವಂ
ಮಸಗಿ ಹೊಸಗಿ ಛಲದಿಂ ಬಲದಿಂ ತರಿದು ತಿಂದು
ಉದರಮಂ ಸಂಪೋಷಿವರಲ್ತೇ? ಪ್ರಕೃತಿಯು
ಒಂದೆಡೆ ಸುರ ಸೌಮ್ಯಳಿರೆ ಮತ್ತೊಂದೆಡೆ ಕೂರ
ರಕ್ಕಸಿಯೊಲ್ ಆಹುತಿಗೊಳೆ ಆರ್ರೈ ರಕ್ಷಿಪರ್?
ಇದಂ ಸಾಮಾನ್ಯವೆ? ಕಡು ಕಷ್ಟಂ! ಎನುತಾಂ
ಪಿಂತಿರುಗೆ ವನವರ್ತ್ಮದ ರೇಖಾ ಪಥದೊಳ್
ಮುಂದೆಮುಂದೈತರೆ ವಾಮಾಂಗದೊಳ್ ಗಿರಿತಲ
ತಾಣದಲಿ ಜನವಸತಿಯಿರ್ದ ಪರ್ಣಕುಟಿಗಳ್
ಆವ ಮಾಯತಂತ್ರಮೊ ಅಗ್ನಿಗಾಹುತಿಯಾಗಿ
ಜನಂ ಸಂಕಷ್ಟದಲಿ ಗೋಳಿಡುತ ದುರ್ವಿಧಿಯಂ
ಶಪಿಸುತಿರ್ದುದು ಕಣ್ಗಳಿಗೆಸೆಯೆ ಒಳಗೊಳಗೇ
ನರಳಿತೆನ್ನಯ ಜೀವಂ.
ಕರುಣೆಯ ಕರಣ ಬಿರಿದು
ಕಂಬನಿಗಳೊಸರಿ ಹೃತ್‌ಗಾಯಮಂ ಪ್ರಕ್ಷಾಲನೆ
ಗೈಯುತಿರೆ, ತಲೆಬಾಗಿ ಮುನ್ನಡೆದು ಪಳುವಿನಲಿ
ನುಗ್ಗಿ, ಪಜ್ಜೆ ಪಜ್ಜೆಗೆ ತೊಡರುತಿರ್ದಾ ಕಲ್ಲು
ಕಡ್ಡಿ ಮುಳ್ಳು ಮುಂತಪ್ಪ ಎಡರುಗಳನಿನಿತೂ

ಲೆಕ್ಕಿಸದಿರೆ; ಅಹ, ಮತ್ತಿದೇಂ ಪೇರ್ ಶಬುದಂ?
ಬಡಬಡನೆ ಕಿವಿಗಳಂ ಗಡಸು ನುಗ್ಗುವವೊಲ್
ಪೊದಳ್ದುದು! ಆಂ ಬೆಕ್ಕಸ ಬೆರಗಾಗಿ ಮೈಯೆಲ್ಲ
ಮನಸ್ಸಾಗಿ, ಕಣ್ಣಾಗಿ ನಿಂತ ನಿಲುವಿನೊಳ್
ನೋಡುತಿರ್ದಾಗಲೆ ವಾಮವಕ್ಕದ ಮಹೇಂದ್ರ
ಕುತ್ಕೀಲ ಶಿಖರದಾ ಪೆರ್ಬಂಡೆಗಲ್ಲುಗಳ್
ಆವ ಶಕುನಿಯ ಕುತಂತ್ರಮೊ ಎನಲ್ಕೆ ದಡದಡ
ಉರುಳಿದುವಲಾ ಬುಡಂಗಳಚಿ! ಒಡೆದು ಸಿಡಿಸಿಡಿದು
ಚೂರು ಚೂರಾಗಿ ರುದ್ರಭೀಷಣಮಾಯ್ತು ಕಣಾ!
ಭೂವಿಕೋಪಂ!! ಆಗಳುಂ ಪರ್ವತದ ಶಿಖರ
ದೇಶದಿಂ ಮಹಾಜ್ವಾಲಾವಹ್ನಿ ಉಕ್ಕುಕ್ಕಿ
ದಹಿಸುತಿರೆ ಗಿಡಮರಗಳೆಲ್ಲಂ ಕಣ್ಮುಂತೆ;
ತಂಗಾಳಿ ಬೀಸಿವೀಸಿ ಬೀಗಿದವೊಲ್ ಬೀಗಿ
ಬಿರುಸುಗೊಂಡು ಘೋರ ರಣರಂಗಕೆನೆ ಭೋರನೆ
ಬೀಸೆ ಬಣ್ಣಿಸಲೇನದಂ? ಘೋರ ಶಬುದ ನೆರೆ
ಮೊರೆದುದು ಕಿವಿಯ ಸೆಲೆವೊಡೆಸುವವೊಲ್! ಕಣ್ಗೆಟ್ಟು
ನಡೆಗೆಟ್ಟು ಗಾರುಗೆಟ್ಟು ನೋಡುತಿರೆ ಮತ್ತೆ
ಮತ್ತೆ ಮೇಣ್ಮತ್ತೆ ಉರುಳಿರ್ದಾ ಕಲ್ ಕಲ್ಗೆ
ಗಟ್ಟಿಸಿ ಕಿಡಿಗಳ್ ಪೊಣ್ಮೆಗಾಳಿ ಸರಸದಿಂದೆ
ಪದತಲದ ಬಿದಿರು ಮೆಳೆಗಳ ಮುಟ್ಟಿ ಸುತ್ತಲುಂ
ಧಗಧಗಿಸಿ ಪೊತ್ತುರಿಯೆ, ಕಾಳ್ಗಿಚ್ಚು ಚಟಚಟನೆ
ಚಟಪಟಿಸಿ ಉದ್ಬುದ್ಧ ಕೆನ್ನಾಲಿಗೆ ಝುಳಪಿಸಿ
ಆಕಾಶಕ್ಕೇರ್ವಡೆದ ಪೆರ್ಬೆಟ್ಟದ ತೆರ್ಬಿದೊಲ್
ಎಡೆಎಡೆಗೆ ಪರ್ವಿ ಚಂಡ ಪ್ರಚಂಡತನದಿಂ
ಧಗಧಗಿಸಿ ಪೊತ್ತುರಿಯೆ ನಭೋದೇಶಕ್ಕೆ ಕಿಡಿ
ಎರಚಿ ಧೂಪಿಕ್ಕಿದವೊಲಾಯ್ತುಲಾ ನೋನ್ನೋಳ್ಪ

ಕಣ್ಮುಂತೆ! ಆ ಚಣಂ ಮೈ ನಡುಗಿ, ಕಾಲ್ನಡುಗಿ
ಮನ ಕುಸಿಯೆ, ಮಹೇಂದ್ರ ಕುತ್ಕೀಲ ವನರಾಜಿ
ಸುಟ್ಟುರಿದು ಕೆಂಡಗಳ್ ಥಳಥಳಿಸಿ ಬೂದಿಯುಂ
ಉದುರುತಿರೆ ಕಂಡೆನಾ ಸೃಷ್ಟಿಯದ್ಭುತ ಮಹಾ
ಕಮನೀಯ ಕಠೋರಮಾ ಸಂಜೀವನ ಸತ್ಯಂ!
ಪರಮಸೌಂದರ್ಯದಿಂದೊಪ್ಪುವ ವರಪ್ರಕೃತಿ
ರಕ್ಕಸಿಯೊ? ಮಾತೃಕೆಯೊ? ಎಂದೆಂಬುದನೆನ್ನೊಳ್
ಕಿಂಚಿತ್ ಬಗೆಯಲ್ಬಾರದಿರೆ ನಿಂತೆನಲ್ಲಿಯೆ
ಕಟುಯೋಚನೆಯಾಳಕಿಡುಕಿ ಮನಮಂ. ದೂರದ
ಎದುರುವಕ್ಕದೊಳಿರ್ದ ದಂತುರದ್ರಿಯ ಮೇಲೆ
ಸ್ವರ್ಣರವಿಯ ಐಸಿರಿ ಸೋರಿ ಪಚ್ಚರಾಜಿಯೊಳ್
ಕನಕ ಕಾಂತಿ, ವಿಜೃಂಭಿಸಲ್ ಏಂವೇಳ್ವೆನೊ
ಈ ಜಗತ್ ವ್ಯಾಪಾರದಾಮೋದದದ್ಭುತಂ!
ಅಂತಿಂತು ಮನಃಪ್ರಾಣಂ ಕಟ್ಟಚ್ಚರಿಯ ಘನ
ಚಕ್ರದೊಳ್ ಸಿಲ್ಕಿರಲ್ ಸ್ವಪ್ನವಳಿದು ತೆಕ್ಕನೆ
ನಿದ್ದೆಯಿಂ ತಿಳಿದು ಸೃಷ್ಟಿಯತಿ ಘೋರವೈಸಲೆ?
ಎಂದೊದರೆ ಭೀತ ಭಾವದಿ ನವಿರ್ ನಿಮಿರ್ದುವು.
ಕವಿ ಕಾವ್ಯಸ್ಫೂರ್ತಿಗೆ ನಿಜಪಾತ್ರದಿ ರೂಪಿಸುವ
ಕನಸು ಬರಿ ಕನಸೆಂಬೆಯಾ? ನಿತ್ಯ ನನಸಿನಾ
ಚಿತ್ತಾರ ಕಣಾ! ಜೀವನೀಯ ಜಂಕಣೆ ಕಣಾ!

— ೦ —

# ತಾಯಿ ಕಾವೇರಿ

ಬಾ ತಾಯಿ, ಬಾ ಬಾರೆ! ಕನ್ನಡ ಕುಲ ಪಾವನಿ!
ಕರ್ಣಾಟಕ ಕೀರ್ತಿ ಧವಳೆ! ತಾಯಿ ಕಾವೇರಿ!
ಬ್ರಹ್ಮಗಿರಿ ತಡಿಯಿಂದ ಚಂದ್ರಗಿರಿ ಚರಣದಿಂದ
ಬಾ ತಾಯಿ ಬಾ ಬಾರೆ, ಹರಿದು ಬಾ; ನಲಿದು ಬಾ;
ಸನಾತನಿ ಸರ್ವವರದೇ ಮಂಗಳಾಂಗಿ ಶಿವೆ!
ಭ್ರಮೆಯಂ ಭ್ರಮಿಸುವವೊಲ್ ಹೊಮ್ಮುವ ಜುಳು ಜುಳು
ಮಂಜುಲ ಹರಿಯೊಡನೆ ಇಳಿದು ಬಾ ಮಹಾತಾಯಿ!
ಕರ್ಣಾಟಕ ಹೃದಯ ಸಂಭವೆ ಜನನಿ ಸತ್ಯ
ಸುಂದರ ಮನೋನ್ಮಣಿ ಸರ್ವ ಜನ ಹಿತಕಾರಿ
ಓ ನೀಲ ನೀಲಾಂಬರಿ ತೀರ ದ್ರುಮ ಪೋಷಿಣಿ!
ಬಂಡೆ ಬಂಡೆಗಳ ಮೈದಡವಿ ಮುದ್ದಿಸಿ ಮೇಣ್
ಜೀವಾಳಿಗಳ ನೋಂಪಿಸುವೆ ಮಾತಾಮಯಿ ದೇವಿ!
ಜನ್ಮದಾರಭ್ಯ ಬೈಗೂ ಬೆಳಗೂ ಎಡೆವಿಡದೆ
ತಪವನೋಂತು ಕರ್ಮಧರ್ಮದೈಸಿರಿಯಂ ಮೈಗೊಂಡು
ಬೆಳಗುವ ಪರಮ ಸಂನ್ಯಾಸಿನಿ ಮಹಾ ಮಾತೃಕೆ!
ಶಾಂತಪ್ರಶಾಂತನಿಶಾಂತ ಜೀವನೀಯ ಮಹಾ
ಪಾರಾವಾರದ ಸಂಪೋಷಣೆಯ ಪೊಣೆಗಾರಿಕೆ
ಸಾಮಾನ್ಯಮೇ ಹೇ ಮಹತಾಯೀ ಕಾವೇರಿ!
ಜಡಜೀವನದ ಜಡ ಚೇತನಗಳ ಜಡತ್ವವನೆ
ನೀಗಿಸಲು ನೀನಲ್ಲದಿನ್ನಾರಿಂದ ಸಾಧ್ಯವೈ?
ಬೀಳು ಭುವಿಗೆ ನೀರೊತ್ತಿ ಶಾಲಿವನ ಮುಂದೊತ್ತಿ
ಬೆಂದೊಡಲ ಬಾಧೆಯಂ ತಣಿಸಿ ಜ್ಞಾನ ವಿಜ್ಞಾನ
ಸಂಪದದ ಕೀರ್ತಿ ಪತಾಕೆಯೇರಿಸಿದೆ ಗಗನಕೆ!

ಸೃಷ್ಟಿನಿಯಮದ ಗುಟ್ಟರಿಯೆ ಅನ್ನದ ಬಲಮಿರೆ
ಚಿಂತನೆಯಿಂದಾದತ್ತು ಮತಿಶಕ್ತಿ ಮಹತ್ತರಂ!
ನಿನ್ನಾಶ್ರಯದಲಿ ಕೋಟಿ ಕೋಟಿ ಕೈಗಳೊಂದಾಗಿ
ದುಡಿದು ಶಕ್ತಿ ಸಾಸಂ ಘನಿಸೆ ಏಂ ಘನಂ? ಏಂ
ಆನಂದರಸಾಸ್ವಾದನೆಯ ಮಹಾ ತೋಷಂ!
ಮಾನಿನಿ ಮನಮೋಹಿನಿ ಕವೇರ ಮುನಿ ಸಂಜಾತೆ
ನೀನಲ್ತೆ ಎಲ್ಲ ಜಾನಿಕೆಯ ದಿವ್ಯ ತಳಹದಿ?
ಪ್ರಚಂಡ ಪ್ರಕೃತಿಯ ಪ್ರಚ್ಛನ್ನ ಶಕ್ತಿಯಂ
ನಿಚ್ಚ ತಪೋವಹ್ನಿಯೊಳದ್ದಿದ ಧೀಮಂತ ಧೀಶಕ್ತಿ
ಸಾಮರ್ಥ್ಯ ಶ್ರದ್ಧಾಗಮ್ಯಂ! ಮೇಣ್ ಜಗದ್ಭವ್ಯಂ?
ಇನಿತು ತಳ್ವದೆ ಯೋಜನ ಯೋಜನ ನಡೆಯುತಿಹೆ
ನಿತ್ಯ ನಿರಂತರ. ನಿನಗಣಂ ಸೋಲಿಲ್ಲಂ; ಅಮಿತ
ತೋಷದೀ ಜುಳು ಜುಳು ನಿನದ ತರಂಗ ರಂಗದಲಿ
ನಿಚ್ಚಗಾನಗೇಯ ಭಜನ ವೈಖರಿಯಿಂದೆ!
ನೋಡಾ ಬೃಂದಾವನ ವಿಸ್ತಾರಂ! ವಿಶ್ವೇಶ್ವರಾ
ಕೃತ ಸರೋವರ ಜಲ ಲೀಲಾಖೇಲನಂ! ಇದಲ್ತೆ?
ಸಾರ ಸರ್ವಸ್ವಂ ನವ ಸಂಜೀವನ ಜೋತ್ಸ್ನೆಗೆ!
ಅಹ, ಪೊಳ್ತುನ್ನತಿಗೇರುತಿರೆ ರವಿ ಕಿರಣ ಪ್ರತಿ
ಫಲಿತ ಜಲ ರಾಶಿಯುಂ ಫೇನ ಪುಂಜ ರಚನಾ
ಸ್ಖಲನಾ ಕಾರ್ಯಕಾರಣದ್ಭುತ ಪಡಿಯೈಸಿ
ಶಕ್ತಿಶ್ರೀ ರಭಸದಿಂ ಮುಂಬರಿದು ಚಿರಾಚರಿತ
ಯೋಗದಿಂ ಸಂಭಾವದಿಂ ಅಭಿಮಂತ್ರಿತ ಪುಣ್ಯ
ಜಲನಿಧಿಯೆನೆ ಭಾರತಾಂಬೋಧಿಯಲಿ ಸಂಮಿಳಿಪ
ಮಹಾ ಮಹಿಮಾಮಯ ಚರಿತ್ರೆ, ಬಲು ಸುಂದರ
ಮಾತ್ರಮೇಂ? ಸಕಲ ಕಲ್ಯಾಣಕರಂ; ಲೋಕೋತ್ತರಂ!

— ೦ —

## ಡಾ॥ ಆ್ಯನಿಬೆಸೆಂಟ್

(ಆಧಾರಿತ)

ಕಾಲ ಚಕ್ರ ಉರುಳ್ದುರುಳ್ದು ದೂರ ಸುದೂರ
ಸಾಗುತಿರುವನ್ನಂ ಒಳಿತು ಕೆಡಕುಗಳ್ ಮತ್ತಮಾ
ಕಷ್ಟಸುಖಗಳ್ ಚಕ್ರ ಚರಣಂಗಳಿಗೆ ಸಿಲ್ಕಿ
ಧೂಳೀಪಟವ್ಯೆಸಿ ಕಣ್ಮರೆಯಪ್ಪುದು ಸಹಜಂ!
ಓವೊ ! ಎಂತಪ್ಪ ಲೋಕಮಾನ್ಯರ್ ಸಂಜನಿಸಿ
ಪುಣ್ಯಭೂಮಿಯಲಿ ಪುಣ್ಯಕಾರ್ಯವ ಗೆಯ್ದು ನೆರೆ
ಶ್ರಮದಾನದಿಂ ಜೀವನವನ್ನೆ ತೇಯ್ದು ಜಡ
ದೇಹವೊಗೆದಿಲ್ಲಿ ಸಂದಿಹರೊ ಆ ದಿವ್ಯಮಾ
ಸಗ್ಗದೇಗುಲದ ನಿಚ್ಚ ಕೈಂಕರ್ಯಂ ಬಯಸಿ!
ಭಾರತ ವರ್ಷದ ಪುಣ್ಯ ವೇದಾಂತ ಕಸ್ತೂರಿ
ಪರಿಮಳಂ ವಿಶ್ವಪರಿಸರದಲಿ ಹರಡಿ ನಿಚ್ಚ
ಪರಿಮಳಿಸೆ ಎನಿತೊಂದು ಜೀವ ಭ್ರಮರಂಗಳ್
ಬಂದು ಬವಣೆಬಟ್ಟು ಪರಮ ಸೇವೆಯಂ ಸತತ
ಸಲ್ಲಿಸಿದರೊ ಮನಸೇಚ್ಛೆ, ಅದನಿಂದಳೆಯಲಕ್ಕುಮೇ?
ಇಂತಪ್ಪ ಸಂಸ್ಕೃತಿಯನಾರ್ಯೆದೆಂತು ಬಂದರೊ
ಅಂತೆಯೆ ಸಂದರಲ್ತೆ? ಏನುಮೇನ್ ತಮ್ಮೊಡಂ
ಕೊಂಡೊಯ್ದರಿಲ್ಲಂ! ಸೇವೆ-ಸೇವೆಯೇ ಪರಮ ಗುರಿ!
ಸೇವೆಯೇ ಸರ್ವೋಚ್ಚ ದಮ್ಮಪದ ಜೀವನಕೆ!
ಇದನರಿತರಿತು ದುರ್ಮನದ ದುರಾಶೆಯ ಅತೀ
ದುಶ್ಚಟದ ದುಮ್ಮಾನಗಳ ಪರಾಕಾಷ್ಠೆಯಲಿ
ಮನವೆರ್ಚಿ ಮೈಮರೆತು ಲೋಕ ಕಂಟಕತನದ
ಕೇಡಿಗರ ಜೀವನವೊಂದು ಜೀವನಮೆ ಒಡೆಯಾ?
ಇಂತಪ್ಪ ಬುದ್ಧಿಹೀನರ ಸೇವೆಗೈವುದರೊಳ್

ನೋಯದೆ ಅಳುಕದೆ ಸೇವೆಯೊಳೆ ದಿನಗಳೆದವರ
ಎಂತು ಭಾವಿಸಿ ನೆನೆಯಲಕ್ಕುಮೋ ಕಾಣೆ ನಾಂ!
ಏನೆಂಬೆನೊ ಈ ಭೂಮಿಯ ಘನ ಪುಣ್ಯಯೋಗಂ!
ಆರಾರ್ ಬಂದಿಲ್ಲಿ ಭಕ್ತಿಯಿಂ ಸಂಸೇವಿಸಿ
ಮಣ್ಣ ಹುಡಿಯಲಿ ಮಲಗಿ ಮಣ್ಣಾಗಿ ಬೆರೆತಿಹರ್!
ಲಂಡನ್ ಸಂಜಾತೆ ಡಾ॥ ಆ್ಯನಿಬೆಸೆಂಟ್ ಮಾತೆಯು
ನಮ್ಮೀ ರಾಷ್ಟ್ರಕೆ ಗೈದಿಹ ಸತ್ ಸೇವೆಯಂ
ಆನೊಂತೊರೆವೆನೊ ಈ ಕಿರು ಕವನದಲಿ ಪೇಳ್?
ಸರ್ಸಾವಿರದೆಂಟನೂರ ನಲವತ್ತೇಳರಾ
ಅಕ್ಟೋಬರ್ ಒಂದನೆಯ ತೇದಿ ಲಂಡನ್ ನಗರಿ
ಶುಭದಿನಂ ಕಂಡಿತ್ತೈ ಭಾರತದ ಪುಣ್ಯಮೇ
ಘನಿಸಿದವೊಲ್!
ಸುಂದರ ಗೃಹದ ಒಳಕೊಠಡಿಯ
ಮುಚ್ಚಿರ್ದ ಬಾಗಿಲಿನ ಗಂಭೀರ ತೆರೆಮರೆಯ
ಹಿಂದೆ ಸೂಲಗಿತ್ತಿ ಢಣ ಢಣನೆ ಗಂಟೆಬಾರಿಸೆ
ಹೊರಗುಳಿದ ಮಂದಿ ಕೂಗಿ ಕೇಳಿದರ್ ಜನಿಸಿದ
''ಮಗು ಹೆಣ್ಣೊ? ಗಂಡೊ?'' ಎಂದು! ಸೂಲಗಿತ್ತಿಯುತ್ತರ
ಒಳಗಿಂದ ಪೊಣ್ಮಿತು ಮೆಲುದನಿಯಲಿ ''ಹೆಣ್ಣು!'' ಆ
ಉತ್ತರಂ ಕೇಳ್ದು ಮೂಡಿದುದು ಹಿತಮೊ ಅಹಿತಮೊ
ಪೇಳುವವರಾರ್? ಆರೂ ಸಂತಸದ ಸೊಲ್ಲು
ಎತ್ತದಿರೆ ''ಹೆಣ್ಣು'' ಎಂದುದಕೆ ಲಘುತಾತ್ಸಾರ
ಇರ್ದುದು ದಿಟಂ ಎಂದೊಡೆ ವಿಶೇಷಮೇನಲ್ತು
ಮಗು-ಆ್ಯನಿ ಎಲ್ಲರೊಲು ತಾಯುಡಿಯ ಮಗುವಾಗಿ
ಮುದ್ದಿನಿಂ ಬೆಳೆದು ಐದು ಸಂವತ್ಸರಗಳ್ ಕಳೆಯೆ
ಶಾಲೆಯಂ ಸೇರಿದಳ್. ಆಗಳ್ತೆ ಏಕಾಂತ
ಚಿಂತನ, ಅಸಾಧಾರಣ ಪ್ರತಿಭೆ ಪೊದಳ್ದುದು

ತಾನೇ ತಾನ್ನೈಸಿ! ನೋಳ್ಪ ಕಣ್ ಅಚ್ಚರಿಪಡುವೊಲ್!
ಶಾಲಾ ಶಿಕ್ಷಣಂ ಪೂರೈಸಿ ಪ್ರೌಢ ಶಿಕ್ಷಣಂ
ಪಡೆದಳ್. ಘನವೆತ್ತ ಮನಃಚಿತ್ತ ಮಂಥನಂ
ಅಂತರಾತ್ಮದರ್ಶನ ಮೇಣ್ ಈಶ್ವರೀಯ
ಪ್ರೇರಣಾ ಇಂತಪ್ಪ ನಿತ್ಯ ಚೋದನೆ ಕಾಲ
ಕಾಲಕೂ ಒದಗುತಿರ್ದುದು ಭಾರತದ ಸುದೈವ!
ಹದಿಹರೆಯದ ಆ್ಯನಿಯೊರ್ಮೆ ತೋಂಟದಂಚಲ
ಕರ್ಪುಗಲ್ಲಿನ ಮೇಲೆ ಕುಳಿತಿರ್ದಳೇಕಾಂಗಿ!
ನಡುಹಗಲ ಸುಡುಬಿಸಿಲ್ ಉರಿಯುತಿರೆ ನೆತ್ತಿಯಲಿ
ಕಂಗಳಿಗೆ ಮಸುಗಳ್ತಲೆ ಕವಿದುದು ಅರೆಚಣಂ.
ಆಗಳಾ ಪಚ್ಚ ಪಟ್ಟುಡೆಯುಟ್ಟ ವನದೇವಿ
ಎದುರ್ಗೆತ್ತು ನುಡಿದಳ್ ''ಮಗುವೆ! ಈ ಪೃಥ್ವಿಯೊಳ್
ನೀಂ ಭರಿಸಬೇಕಾದ ದುಃಖ-ಸಂಕಟ-ಸೇವೆ
ಅಪಾರ! ಅದಕೀಗೀಂದಲೇ ಸಿದ್ಧಳಾಗೈ!''
ಸ್ಪಷ್ಟದನಿ ಕೇಳಿಬರೆ ಶ್ರೀವನಿತೆ ಮಿಡುಕಿದಳ್
ಮೈಗೆ ತಣ್ಣೀರೆರೆಚಿದವೊಲ್!
ಕಣ್ ಕಳಕಳಿಸಿ
ನೋಡೆ ಎಲ್ಲಿಯ ದೇವತೆ? ಬರಿಯ ಗಿಡುಮರಗಳೆ!
ಆ್ಯನಿ ಅದೆ ಚಿಂತನೆಯ ಸಂಭಾವನಾ ನಿದ್ರೆಯೊಳ್
ಮುಳುಗೆದ್ದು ಧ್ಯಾನವಿಲಯ ಮಧುರ ಸ್ವಪ್ನದಲಿ
ಮೈ ಮರೆತು ಭಕ್ತಿರಸ ತುಂಬಿ ಕರಯುಗಳಂ
ಜೋಡಿಸಿ ಕಣ್ ಮುಗಿದಿರುತಿರೆಯಿರೆ ಆತನುವಾಣಿ
ಮೊಳಗಿದುದು ಮತ್ತೆ ''ಮಗುವೆ! ನೀ ಬರಿಕತ್ತಲೆ
ಬಾಳಿಗಲ್ಲ ಬಂದುದಿಳೆಗೆ. ನೆರೆ ಪರಿಭಾವಿಸಿ
ನೋಡು ನಿನ್ನೊಳ್!'' ಆ್ಯನಿ ಕಣ್ತೆರೆದು ಸುತ್ತಲೂ
ನೋಡೆ ತೆಕ್ಕನೆ ಮೈಮನಗಳಲಿ ಬಿಸಿನೆತ್ತರ

ಝುರಿ ಝಿಲ್ಲನೆ ಹರಿದಾಡಿತು ಬಿಸಿಬಿಸಿಯಾದೊಲ್!
ಆ್ಯನಿ ಅಲ್ಲಿಯೆ ಶತಪಥ ತಿರುಗಿದಳ್ ''ತನ್ನಯ
ಜೀವನಕ್ಕೊಂದು ತಿರುವು ನೀಡುತಿರುವ ತಾಯಿ
ಆರಿರ್ಪ್ಪಂ? ನೀನಿಂತು ಕಜ್ಜಮೆಸಗೆಂದು ತಾಂ
ನಿರ್ದೇಶಿಸದೆ ಎಲ್ಲಮೆನ್ನ ನಿರ್ಣಯಕ್ಕೇ
ಬಿಟ್ಟಳಲ್ತೆ? ಅದೇಕೆ?'' ಎಂಬುದೆ ಆಂತರಿಕ
ಪ್ರಜ್ಞೆಗೂ ಅರ್ಥೈಸಲಾಗದ ಒಗಟು. ದಿನದಿನಂ
ಮನಃಪ್ರಾಣಗಳಿಂಗೆ ''ನೀಂ ಬರೀ ಕಳ್ತಲೆಯ
ಬಾಳಿಗಲ್ಲ ಬಂದುದಿಳೆಗೆ'' ಎಂಬ ನುಡಿಗಟ್ಟು
ಮತ್ತೆಮತ್ತೆ ಪುನಃಪುನಃ ಕಿವಿಯ ಸನಿಹದೊಳೆ
ಮಿಡಿಯುತಿರೆ ಯೋಚನಾಶೀಲತೆಗೆ ಮೇಣ್ ತಿಳಿ
ಮನದ ಭಾವುಕ ಪ್ರಜ್ಞೆಗೆ ಪೂರಕಮಾಗುತಿರೆ
ದಿನದಿನಂ ವಿದ್ಯಾಧಿದೇವತೆಗೆ ಶರಣೆಂದು
ಕಾಡಿಬೇಡಿದೊಡಂ ಮನಃಚಿತ್ತ ಮಂಥನದಿ
ನಿರ್ಧರಿಸಲಾಗದ ಪರಿಭವ!

ದಿನಗಳುರುಳ್ದು

ಪ್ರಾಜ್ಞ ವಿದ್ಯಾಭ್ಯಾಸ ಕೊನೆಗೊಂಡುದು ಪೆರ್ಚಿನ
ಪರಿಶ್ರಮವಿಲ್ಲದೆಯೆ. ಏಗಳುಂ ಪ್ರಾಪಂಚಿಕ
ನೋವು ನಿಡಿಗಳ್ ನಲಿಯುತಿರ್ದುವಕ್ಷಿ ಪಟಲಂ
ತಿವಿವವೊಲ್! ಇಂತಪ್ಪ ನೋವು ನೀಗಿಸುವಂತು
ದುಡಿಯಬಲ್ಲೆನಾದೊಡೆ ಒಳ್ಳಿತಲ್ತೇ? ಎನಲ್
ತನ್ನೊಳ್. ಉತ್ತರಿಸಿತಂತರಾತ್ಮ ಉತ್ಸಾಹ-
ಸ್ಫೂರ್ತಿಗಳನೊರ್ಮೆಗೇ ಚೋದಿಸುವೊಲ್ ''ಅದುವೇ
ನಿನ್ನ ಮುಂದಿರುವ ಮಾರ್ಗಯೋಗಂ!''

ಆ ಮಾತು

ಸ್ಪಷ್ಟವಾದೊಡಂ ವೈವಾಹಿಕ ಜೀವನೀಯ

ಬಂಧನದ ಬಿಗಿಗಟ್ಟು ಪಾಠಕಲಿಸಲೆಂದೆನೆ
ಬಿಳ್ದುದೊ ಎನಲ್ ಆ್ಯನಿ ಬೆಸೆಂಟ್-ನ ಬಾಳ್ಬಂದಿ
ಯಾದ ತರುಣದೊಳ್ ಶಿಶುದ್ವಯಗಳ್ಗೆ
ತಾಯಾಗಿ ಜಗದೃಷ್ಟಿಗೆ ಸಂಸಾರಿಯಾದೊಡಂ
ಮಾನಸಿಕ ತುಮುಲ ಸಂಸಾರದ ಬಿಗಿಗಟ್ಟಂ
ಸಡಲಿಸುವ ಸನ್ನಾಹದೊಳಿರ್ದಾಗಳೆ ಪತಿಯ
ಅತಿವರ್ತನೆ ಅಲ್ಲದೆ ಸಲ್ಲದ ದುರಾಶೆಯಾ
ಧೂರ್ತತನ ಮಿತಿ ಮೀರುತಿರೆ ಆ್ಯನಿಬೆಸೆಂಟ್
ಅತೀವ ಕಳಕಳಿಯಿಂ ತಳಮಳಿಸಿ ನರಳಿದಳ್.
ಆ ಕಷ್ಟದಿಂ ಪಾರಾಗುವುದೊಂದೆ ಬೆಸನದಿಂ
ಕಡು ಚಿಂತೆಗೆತ್ತು ಧೂರ್ತ ಭರ್ತನಾ ಸಂಬಂಧ
ಕಡಿದುಕೊಳೆ ಜೀವನಂ ಕೊನೆಗಾಣಿಸಿ ಕೊಳ್ಳುವ
ನಿರ್ಣಯಂ ಮೂಡೆ ಮನದಿ, ಜುಗುಪ್ಸೆ-ತಾತ್ಸಾರ
ಸಂಕಟಗಳಿಂ ಆ್ಯನಿಬೆಸೆಂಟ್ ಘೋರತರದ
ವಿಷಂ ತುಂಬಿರ್ದ ಬಟ್ಟಲಂ ಕೈಕೊಂಡಳೇಕ
ಮನದಿ! ಅಃ, ನಿಶ್ಯಬ್ಧತೆ-ನೀರವಗಳ್ ಹೆಪ್ಪು
ಗಟ್ಟಿದೊಲ್ ಮನೆಯೆಲ್ಲಾ ಬಣಬಣ! ಗಂಭೀರ
ಮಸಣಮೌನವಾವರಿಸಿದೊಲ್ ಘೋರತರಮಾ
ಅಸಹನೀಯ ಶಾಂತಿ! ಆ್ಯನಿಬೆಸೆಂಟ್ ವಿಷದ
ಬಟ್ಟಲಂ ಕಡು ದುಃಖದಿಂ ನೊಂದ ಚಿತ್ತದಿಂ
ತುಟಿಗೊಯ್ಯೆ ಒರ್ಮೆಲೇ ಆತನುವಾಣಿ ಕಿವಿಯ
ಸನಿಹದೊಳೆ ಮೊಳಗಿತು ''ಎಲೆ, ಹೇಡಿಯೆ! ಈಯೊಂದು
ಸಂಕಷ್ಟವ ತೊಡೆಯದೆ ಜೀವನಕೆ ಹೆದರಿ ನೀಂ
ಆತ್ಮಹತ್ಯೆಗೈದೊಡೆ ನರಜನ್ಮದ ಫಲವೇಂ?
ಆತ್ಮಸಮರ್ಪಣೆಯ ಪಾಠ ಕಲಿತು ಸತ್ಯಾರ್ಥಮಂ
ಕಂಡುಕೊ. ಅದುವೆ ಜೀವನಯೋಗಕೆ ನಿಜ ಪಥಂ!

ಅಂತರಂಗದ ಕರೆ ಕಿವಿಯಂ ತಾಗೆ ಮೈಯೊಳ್
ವಿದ್ಯುತ್ ಝುರಿ ಜರ್‍ರನೆ ಹರಿದೊಲಾಗಲಾ ವಿಷದ
ಬಟ್ಟಲಂ ರೊಯ್ಯನೆಸೆದಳ್! ಆದೋಡೇಂ ಬಾಳ್
ಬಂಗಾರವಾಗಲಕ್ಕುಮೆ? ಅದೇ ಕಡುಧೂರ್ತ
ಪತಿಯ ಅಸಹ್ಯ ಸಹವಾಸ! ಜುಗುಪ್ಸೆ-ಬೇಸರ!
ತಾಳಲಾಗದ ಚಿಂತೆ!
ಸಂಧ್ಯಾಸಮಯೆ ಮನೆಯ
ಉದ್ಯಾನದಿ ಭಾವಿಸಿ ತವಿಸಿ ಏಕಾಂತತಾ
ಚಿಂತೆಯಿಂ ಭವಿಷ್ಯದ ರಂಗದೊಳ್ ಅಂಡಲೆದು
ಸೋಲ್ದೊಡಂ ಏಂಗೈವುದೆಂಬುದು ಸರಿ ನಿರ್ಣಯ
ಬಾರದಿರೆ ಕಡುಚಿಂತೆಗೆತ್ತಳ್ ಆ್ಯನಿಬೆಸೆಂಟ್!
ಮನದಿ ಕಿನಿಸಿಗೆ-ಕಳವಳ-ಸಂಕಟಗಳು ತುಂಬಿ
ಕಡುನೋವಿನಾಗರಮಾಗೆ ನಿಂತೆಡೆ ನಿಲದೆ
ಕುಳಿತೆಡೆಯಲಿ ಕೂರದೆ ತೊಳಲಿ ಬಳಲುತಿರೆ
ಅರೆ ಮರುಳರ ಮಾಳ್ಕೆಯೊಲು ಸೈಪರಿಲ್ಲದೆ ನೊಂದು
ನೋಯುವರ ನೆರಮಿಲ್ಲದೆ ಕೊರಗಿದಳೇಕಾಂಗಿ!
ಆಗಳಂತರ್ವಾಣಿ ಕಿನಿಸಿನಿಂ ಕೂಗಿ ಹೇಳಿತು!
''ಅಹಃ ನೀನೆಂತಪ್ಪ ವಿದ್ಯಾವೀಭೂತಿ? ಏಂ
ಕಳವಳ? ಅಶಾಂತಿ? ಶಾಂತಿಯಂ ಬಯಸಿ ಈಪರಿ
ಅಶಾಂತಿಯಂ ಒಳಗೊಂಬರೆ? ತೆಗೆ ಪರಿಹಾಸವಿದು!
ಸತ್ಯಾನ್ವೇಶಣೆಗಾಗಿ ಜೀವನೀ ವಾಸನೆಯ
ತುಳಿಯಲಾರೆಯಾ?''
ಹಾ! ಎಂತಪ್ಪ ನಲ್ ಪ್ರಶ್ನೆ?
ನಾನೇಕೆ ನಿಜಕ್ಕೂ ಹೇಡಿಯಾದೆ? ಛೀ! ಛೀ!
ಆನಿನ್ನು ಭವಬಂಧನದೊಳಿರಲಾರೆ. ಸತ್ಯದ
ನೆಲೆಯನೆನ್ನೊಳ್ ಕಾಂಬುದೆ ಜೀವನೀಯ ಗುರಿ!

ಸತ್ಯಮಾರ್ಗಯೋಗಮೆ ಗಮ್ಯಸ್ಥಾನದ ಗುರಿ! ಇಂ
ಪಿಂಜರಿಕೆ ಎಂಬುದಿಲ್ಲಂ! ಎಂದುಮೆಂದು ತಾಂ
ತನ್ನೊಳ್ ದೃಢ ಪ್ರತಿಜ್ಞೆಗೈದು, ತನ್ನೆರಡು ಎಳೆ
ಮಕ್ಕಳಂ ಮೇಣ್ ಪತಿಯಂ ತೊರೆದು, ತನ್ನೆದೆಯ
ದಿವ್ಯ ಪ್ರೇಮಾಮೃತವಂ ವಿಶ್ವಜಗತ್ತಿಗೆ
ಉಣಿಪುದೊಂದೆ ಧ್ಯೇಯದಿಂ ಹೃನ್ಮನಗಳ್ ತುಂಬಿ
ತುಳುಕುತಿರೆ ಭವದಾಸೆ ಮೇಣ್ ಸ್ವಸುಖದಾಸೆ
ಎರಡುಂ ಸುದೂರಮೆಸೆದು ಪೊರವಂಟಳ್ ಗೃಹ
ತ್ಯಾಗಿಯಾಗಿ! ಅಂದೇ ಅಂತಪ್ಪ ಭಾವನೆಯಂ
ದಿನಚರಿ ಪುಟದಲಿ ಹೃದಯವಂತಿಕೆಯಿಂ ತನ್ನಂ
ಕುರಿತಿಂತು ಲೇಖಿಸಿರ್ಪಳ್ ''ಈ ಸುಕೋಮಲ
ಸ್ವಭಾವ, ಸಸ್ನೇಹ ಪ್ರೀತಿಗಳಾಗರ ಮೇಣ್
ಮೃದು ಭಾವುಕ ಪ್ರವೃತ್ತಿಯ ದೇಹದಾಳದಲಿ
ಅಂತರಂಗಿಕ ದೃಢ ಸಂಕಲ್ಪ ಶಕ್ತಿಗಳ
ವ್ಯಕ್ತಿತ್ವಮಿರ್ದು ಯಾವುದೇ ಪ್ರಕಾರಗಳ
ಧೂರ್ತಶಕ್ತಿಯ ವಿರುದ್ಧ ಬಂಡಾಯವೇಳಲು
ಸಿದ್ಧವಿರ್ಪ ಧೀರಶಕ್ತಿಯ ಅವತರಣಮಿಹುದು!''
ಹಾ! ಎಂತಪ್ಪ ಉಲ್ಲೇಖ! ರಕ್ತ ರಂಜಿತಮಾ
ದಿವ್ಯಾಕ್ಷರಗಳಲಿ ದೃಢಮನದೊರತೆ ಇಳಿಸಿ
ನೆತ್ತರ ದಮನಿ ದಮನಿಗಳಲ್ಲಿ ಹರಿದವೋಲ್!
ಮನೆಮಠ ತೊರೆದ ಪ್ರಥಮ ದಿನಗಳಲಿ ಅತೀವ
ಆಧ್ಯಾತ್ಮಪಿಪಾಸೆ ಮನಮಂ ತುಂಬಿರ್ದೊಡಂ
ಸಾಧನೆಯ ಅಪರಿಪಕ್ವತೆಯಿಂದೆ ಮಾನಸಿಕ
ಶಾಂತಿ ದೂರ ದೂರವೆ! ದುಗುಡ ದುಮ್ಮಾನಗಳ್
ಪ್ರಾಣಕುಂಡಲಿ ದುಂಬಿ ಕೋರೈಸುತಿರೆ ಕಿಂಚಿತ್
ಆತ್ಮ ಶಾಂತಿಯಂ ಪಡೆಯೆ ಕೈಕೊಂಡಳ್ ದೇಶ

ಪರ್ಯಟಣೆಯಂ! ಎಲ್ಲೆಲ್ಲಿ ಪಯಣಿಸಿದರಲ್ಲಲ್ಲಿ
ಬಡ ಜನರ ವಾಸದಾಣಗಳಿಗೈದು ಸಂಕಟ-
ಸಂಕಷ್ಟಗಳನರಿತು ಪರಿಹಾರ ಕ್ರಮಮಂ
ಬೋಧಿಸಿ ಮನೆಯಿಂ ಮನೆಗೆ ಅಲೆದಲೆದು ಮನವಂ
ತನಗೆ ತಾನೆ ಸೈಪಿದೊಡಂ ಸಂದ ಶಾಂತಿಯೊಳ್
ಅತೃಪ್ತಿಯೆ! ಎಂತುಮೆಂತು ಈ ಜೀವನಕೊಂದು
ತಿರುವಿತ್ತು ಉದ್ಧರಿಪುದೆಂಬುದು ತಿಳಿಯದಾಗೆ
ಚಿಂತೆಯೊಳೆ ನೂಂಕುತಿರೆ ದಿನಗಳಂ; ಡಬ್ಲ್ಯು. ಬಿ.
ಸ್ಟೆಡ್ ಎಂಬ ಗೆಣೆಯಂ ಮ್ಯಾಡಮ್ ಬ್ಲಾವಟ್ಸ್‌ಕಿ
ಲೇಖಿಸಿದೆರಡು ಪುಸ್ತಿಕೆಗಳಂ ಒದಗಿಸಿದಂ.
ಆ್ಯನಿಬೆಸೆಂಟ್ ಅವನೋದಿ ಮುಗಿಸೆ ಸತ್ಯದ
ಕಿರಣಗಳ್ ಥಳಥಳನೆ ಗೋಚರಿಸಲ್ ದಿಟ್ಟಿಗೆ,
ತನ್ನಜ್ಞಾತ ಶಕ್ತಿಯಂ ಬಡಿದೆಬ್ಬಿಸಿದವೊಲ್!
ಆ ಕೂಡಲೆ ಲೇಖಿಕೆಯಂ ಪ್ರತ್ಯಕ್ಷ ಭೇಟಿ
ಗೈದು ಜಾಗತಿಕ ಜೀವನೀಯ ಜಾಲಾಡಿ
ಆಳಕ್ಕಿಳಿದು ಮ್ಯಾಡಂ ಬ್ಲಾವಟ್ಸ್‌ಕಿ ಸೇವೆಗೈಯೆ
ಇಳೆಯೊಳ್ ಅವತರಿಸಿದ ಅಸಮಾನ್ಯ ಮಾತೃಕೇ
ಎಂಬುದಂ ಮನಗೊಂಡೊಡನೆ ತನ್ನಂತರಾಳದಿ
ತಾಂ ಕಂಡುಕೊಳದಿರ್ದ ದಿವ್ಯಮಾ ದೈವೀಶಕ್ತಿ
ಜಾಗೃತಗೊಳೆ ಪೇಳಲೇನಾ ಮಹತ್ ಅನುಭವಂ!
ವಿಶ್ವವೇ ತನ್ನ ರಾಷ್ಟ್ರ! ಪರೋಪಕಾರವೇ
ತನ್ನ ಧರ್ಮ! ಸತ್ಯವೇ ತನ್ನ ತಾಯಿ ತಂದೆ!
ಮೇಣ್ ಪರಮದ್ರವ್ಯಂ! ಎಂದೆಂಬ ಸುವಿಶಾಲ
ಮನೋಬಲ ಬಲಿತುದು ದೇವದಾರು ವೃಕ್ಷದೊಲ್!
ಆ್ಯನಿಬೆಸೆಂಟ್ ಮಾನಸ ಪಕ್ಷಿ ಎರೆಂಕೆ ಬಿದಿರ್ಚಿ
ವಿಹರಿಸಿತು ಮುಗಿಲಗಲ-ಜಗದಗಲ ಬಾನಗಲ!

ಥಿಯಾಸಫಿಕಲ್ ಸೊಸೈಟಿಯ ದ್ವಾರ ತೆರೆದಿರೆ
ಹರವಾಗಿ; ಅದರೊಳ ಬೊಕ್ಕು, ಧ್ಯೇಯಧೋರಣೆ
ಅರಿತು ಜೀರ್ಣಿಸಿದ ಬಳಿಕ ಶಾಂತಿಯವತರಣಂ
ಹೃನ್ಮನದ್ದೇಶಗಳ ತಳಮಳಂ ಸೈಪಿದೊಲ್!
ದೀನಾತಿದೀನರುದ್ಧಾರಮೆ ಜೀವನೀಯ
ಗುರಿಯಿರ್ಕೆ ಬಂದಳ್ಳೆ ಭಾರತದ ದೀನಜನ
ಜನನಿಯೈಸಿ! ಬಡತನದ ಪ್ರತೀಕ ಭಾರತ!
ಅಶಿಕ್ಷಣ-ಮನಮೌಢ್ಯ ಮತಾಂಧತೆ-ಸ್ತ್ರೀಜನ
ಬವಣೆ ಇಂತೆಲ್ಲಂ ದಯಾದಾರಿದ್ರ್ಯದಿಂ ಬೇವ-
ನೋವ-ಕಾವರಿಲ್ಲದ ಕಾರುಣ್ಯಪ್ರದ ಬದುಕು
ನೋಡಿದೊಡನೆ ಮನನೊಂದು ತಾಂ ನೆಲೆ
ನಿಂದಳ್ ಮನಃಪ್ರಾಣದ ಕಾರುಣ್ಯದ್ರವ್ಯ ಸುಡು
ಬಿಸಿಲಟ್ಟಿದ ಮಂಜಿನೊಲ್ ಕರಗಿ ನೀರಾಗಿ!
ಇಂತಪ್ಪ ಕುಂದು ಕೊರತೆಯಾ ನಿವಾರಣೆಗಾಗಿ
ಸ್ತ್ರೀಶಿಕ್ಷಣ ಯೋಜನೆಯಂ ಸಿದ್ಧಪಡಿಸೆ ತಾಂ
ಪಣತೊಟ್ಟು 'ಬನಾರಸ್ ಸೆಂಟ್ರಲ್ ಹಿಂದು ಕಾಲೇಜ್'
ಸಂಸ್ಥಾಪನೆಯ ಕಾರ್ಯಕೆಂದು ಪಂಡಿತ್ ಮದನ್
ಮೋಹನ ಮಾಳವೀಯರ್ ಗೈದ ವಿದ್ಯಾಲಯದ
ಪುಟ್ಟುವಳಿಗೆ ನೀರೆರೆದು ಅದರ ಸರ್ವಾಂಗೀಣ
ಬಲಿಷ್ಠತೆಗೆ ಬ್ರಿಟನ್ ಮೇಣ್ ಅಮೇರಿಕೆಯಿಂದೆ
ಡಾ|| ರಿಚರ್ಡ್ಸರ್ ಡಾ|| ಅರುಂಡೇಲ್‌ರವರಂ
ಬರಮಾಡಿ ಕಾಲೇಜಿನ ಬುನಾದಿಯಂ ಭದ್ರ
ಗೊಳಿಸಿದಳ್; ಭಾರತೀ ವಿದ್ಯಾಧಿದೇವತೆಯ
ವರ ಪ್ರಸಾದಕನುಗುಣಮಪ್ಪಿ! ಗಿಡಂ ಬೆಳೆದು
ನಲ್ ವೃಕ್ಷವಾಗೆ ಶ್ರಮಿಸಿದ ಆ್ಯನಿಬೆಸೆಂಟ್
ಕೈಕೊಂಡ ಶ್ರಮವಂ ಏನೆಂಬೆನೊ, ಸಗ್ಗದ

ದೇವರ್ಕಳ್ ಅಚ್ಚರಿಬಡುವಂತು, ಬನಾರಸ್
ಧೀಮಂತರ್ ಬಾಯೊಳ್ ಬೆರಳಿಡುವಂತು ಗೈದಾ
ಪರಿಶ್ರಮ ಸಾಮಾನ್ಯವಲ್ತು ಲಂಡನ್ ಸಂಜಾತೆ!
ಇಂತಪ್ಪ ಮಹತ್ತರ ಕಾರ್ಯಂ ಸ್ತ್ರೀ ಸಾಧನೆಯಿಂ
ಕೈಗೂಡಿದುದು ಆ ದಿನಗಳಲಿ ಅದೇ ಪ್ರಥಮಂ!
ಕೃಷ್ಣ ಪಕ್ಷದಲಿ ಪೂರ್ಣ ಚಂದ್ರ ಮೂಡಿದನೆ
-ಎನುವೊಲ್ ಭರತ ವರ್ಷದ ಸಂದಿಗ್ಧ ಕಾಲದಿ
ಆ್ಯನಿಬೆಸೆಂಟ್ ಒದವಿದುದು ಅವಾವ ಪುಣ್ಯ
ಗ್ರಹಗಳ ಚೋದನೆಯೊ ಮತ್ತಾವ ನಾರಿಯರ
ಅದೃಷ್ಟವೊ ಮತ್ತಂ ಭಾರತಭುವಿಯ ಫಲಿತ
ಫಲವೊ ಎನಲ್ಕೆ ಧೃವ ನಕ್ಷತ್ರವೆನೆ ಬೆಳಗಿರೆ,
ಎಲ್ಲೆಡೆ ನತದೃಷ್ಟರ್ ಪೆಂಗಳೆಯರ್ ಮಕ್ಕಳ್
ಮರೆವೊಕ್ಕರ್ ಮಾತಾಯಿ ನೀನೆ ಎಂದೊರೆದು
ಕೈ ಮುಗಿದು ಕಣ್ ಮುಗಿದು ಕಾಲ್ವಿಡಿದು ಬೇಡಿದರ್
ಜೀವನೀ ಸಂಕ್ರಾಂತಿಯವತರಣಿಕೆಯಂ ಕೋರಿ!
ಆ್ಯನಿಬೆಸೆಂಟ್ ದೀನರ ದುಃಖದಲಿ ದುಃಖಿಯೆನೆ
ವಿಹ್ವಲಿಸಿ ಪರಿಹಾರ ಕಾರ್ಯಕೆ ತಲೆಗುಡುವಳ್!
ಓವೊ! ತಿಳಿಸಿದರೆ, ಕಲಿಸಿದರೆ ತಿಳಿದು ಕೊಳ್ವನಿತು
ಜ್ಞಾನಿಗಳೆ ಈ ಜನಜಂಗುಳಿ? ಸಾರಿ ಹೇಳಿದರೂ
ತಿಳಿದುಕೊಳ್ಳಲಾರದನಿತು ಕಠಿಣ ಪರಿಸ್ಥಿತಿ!
ಅವಿದ್ಯೆ-ಅಜ್ಞಾನಗಳ ಪೈಪೋಟಿಯಲಿ ಜಗಂ
ಅರಿಯದಿಹ ಮುಗ್ಧದುಗ್ಧಭಾವ! ಅಂದಿಂದಿಗೂ
ಬ್ರಿಟಿಷರ ಕ್ರೌರ್ಯಮಂ ಮೂಕಮೌನದಿಂದಲಿ
ಸೈಸುತಿಹ ಮುಗ್ಧತೆಗೆ ಎಂತು ಯಾವ ತರದಲಿ
ಕಾಯಕಲ್ಪಗೈವುದೊ ತಿಳಿಯಲಾರದ ಸಮಸ್ಯೆ!!
ಲೋಕದ ಹಿರಿಯರಾಷ್ಟ್ರಗಳ್ ಪ್ರಗತಿಯಲಿ ತೀವ್ರ

ಪೈಪೋಟಿಗಿಳಿದರೆ ಇವರ ಗೋಳನೇನೆಂಬೆ?
ಜನ-ಜನ-ಜನವೇ ಜನ! ಇರುವೆಗಳ್ ಗೂಡಿನಲಿ
ತುಂಬಿತುಳುಕುವೊಲಿರ್ಪ ಮಹಾ ದಂಡುಮಿರಲ್
ಸೇವೆ ಸಾಮಾನ್ಯಮೆ! ಆ್ಯನಿಬೆಸೆಂಟ್-ಗೆ ಮೈಮನ
ಸೋಲ್ದೊಡಂ ಮುಗಿಯದ ಕೆಲಸ! ಅಂಧಕಾರದಲಿ
ಮುಳುಗಿರ್ದ ಜನಸಾಗರಕೆ ಶುಕ್ರ ತಾರೆಯೊಲ್
ಬೆಳಕಿತ್ತು ಮಾರ್ಗದರ್ಶನ ಮಾಡಿಸಿದ ಜನನಿ!
ಎಂದುಮೆಂದೂ ಬೇಸರಿಸದೆ ಮನಃತೂರ್ಯಮಂ
ಊದಿದಂದದಲಿ ಮನಮನ ಪ್ರತಿಧ್ವನಿಸುವಾ
ಕಳಕಂಠವಾಣಿ ಮೊಳಗೆ ಗಿರಿಯಿಂ ಗಿರಿಗೆರಗಿ
ಅನುರಣಿತಮಾದವೊಲ್ ದಿವ್ಯಮಾ ಸಂತಯಿಪ
ವಾಙ್ಮಯ ಮಧುರಧಾರೆ!
ಆ್ಯನಿಬೆಸೆಂಟ್ ತಮ್ಮಯ
ದಿನಚರಿಯಲಿ ಉಲ್ಲೇಖಿಸಿದುದೇಂ? "ಸತ್ಯವೆನ್ನ
ಅಮೂಲ್ಯದ್ರವ್ಯ! ಸತ್ಯವಂ ಸಂರಕ್ಷಿಪುದು
ಪ್ರಥಮ ಕರ್ತವ್ಯವೆನ್ನ. ಸತ್ಯದನುಸಂಧಾನ
ಮೇಣ್ ಸತ್ಯದನ್ವೇಷಣೆಯಲಿ ಏಂ ಸಂಕಷ್ಟ
ಒದವಿದೊಡಂ ಏಂ ಲೌಕಿಕ ಪಾಶ ಛಿದ್ರಿತಮಾಗಿ
ಮೇಣ್ ಪ್ರೇಮದಿಂ ವಂಚಿತಳಪ್ಪಿದೊಡಂ ಆಂ
ಸತ್ಯದೊಡಂ ನಿರ್ಜನ ಪಥವಿಡಿದೊಡಂ, ಸತ್ಯಮೆ
ಪ್ರತ್ಯಕ್ಷಮಾಗಿ ಎನ್ನಂ ಕಡುದುಃಖಕ್ಕೀಡು
ಮಾಡಿದೊಡಂ ಆನೆಂದು ಸತ್ಯಮಂ ಕೈಬಿಡೆಂ!
ಸತ್ಯಪಾಲನೆಯೆನ್ನ ಧ್ಯೇಯ, ಸತ್ಯಪಾಲನೆ
ಎನ್ನಪ್ರಾಣ! ಆಂ ಪ್ರಾಣ ತೊರೆದೊಡಂ ಸತ್ಯಂ
ತೊರೆಯಲಾರೆ! ಸತ್ಯಕಾಗಿ ಪ್ರಾಣಮಂ ಪಣವಿಟ್ಟು
ಹೋರಾಡುವೆಂ! ಸತ್ಯ ತೊರೆದಾಂ ಜೀವಿಸೆಂ!"

ಅಹಹ! ಎಂತಪ್ಪ ಸುಂದರಮಾ ನಲ್ ಉಲ್ಲೇಖ!
ಓವೊ! ಭಾರತಭುವಿಯ ಪುತ್ರಿರತ್ನಳ್ಗೈಸಿದ
ಆ್ಯನಿಬೆಸೆಂಟ್ ಗೈದಾ ಸೇವೆಯೇಂ ಅಲ್ಪಮೇ?
ತನ್ನ ಮಾತೃ ಭೂಮಿಯೊಲೆ ಪ್ರೀತಿಸಿ ಸಂಸೇವಿಸಿ
ಭಾರತೀಯರಂ ತಮ್ಮ ತಾಯೊಲ್ ಗೌರವ
ಮೇಣಾದರದಿಂ ಪರಿಶೀಲಿಸಿ ಅನುನಯದಿಂ
ಮಾರ್ಗದರ್ಶನ ಮಾಡಿಸಿದ ರಾಗಾನುರಾಗಿಣಿ!
ಸಾಸಾವಿರದೊಂಬೈನೂರ ಹದಿನೇಳರಲ್ಲಿ
ಕಲಿಕತ್ತೆಯ ಕಾಂಗ್ರೆಸ್ ಅಧಿವೇಶನದಧ್ಯಕ್ಷ
ಪದಕೆ ಆ್ಯನಿಬೆಸೆಂಟರಂ ಚುನಾಯಿಸೆ ಜನಂ
ಆ್ಯನಿ ಅಧ್ಯಕ್ಷ ಭಾಷಣದೊಳಿಂತು ಅಪ್ಪಣೆ
ಕೊಡಿಸಿದಳ್-''ಭಾರತೀಯರೆನ್ನಂ ಪ್ರತಿಷ್ಠೆಯ
ತಾಜಮಹಲೆತ್ತರಕೆ ಏರಿಸಿ ಅತೀವತರ
ಗೌರವಾದರ ತೋರಿದ್ದಲ್ಲದೆ ಮುಖಂಡತ್ವ
ವಹಿಸಿ ಪರಮ ವಿಶ್ವಾಸ ತೋರಿದುದು ಎನ್ನಯ
ಶಕ್ತಿಗೂ ಮೀರಿದುದು! ನಿಮ್ಮ ಅಭಿಮಾನಮಂ
ಆನೆಂದಿಗೂ ಮರೆಯಲಾರೆ. ಇದಕೆಂತಾಂ
ಧನ್ಯವಾದ ಸಮರ್ಪಿಸುವೆನೋ ಅರಿಯೆನೆನಲ್
ಇಂ ಸೇವೆಯಲ್ಲದೇನಂ ಕಾಣೆ ನಾಂ! ನಿಮ್ಮ
ಪ್ರೀತಿ ಸಹಕಾರದೊಳ್ ನಲ್ ಸೇವೆಗೈಯ್ವುದೇ
ಎನ್ನ ಗುರಿ!''
ಅಹ, ಎನಿತು ವಿನಮ್ರತೆ! ಎಂತಪ್ಪ
ಸೇವಾಮನೋಭಾವ! ಲಂಡನ್ ಸಿರಿ ನಗರಿಯಿಂ
ಐತಂದು ಬಡ ಭಾರತದೇಶದುದ್ಧಾರಕೆ
ಟೊಂಕ ಕಟ್ಟಿದುದು ಸಾಮಾನ್ಯವಲ್ತು! ಮೇಣೇ

ಶತಮಾನದಾದಿಯಲಿ ಭಾರತವೆಂತಿರ್ದುದು
ಭಾವಿಸಿ ತಿಳಿಯಾ! ಇದಂ ಭಾರತೀಯತೆಯ ಸತ್ಯ-
ಧರ್ಮ-ವೇದಾಂತಗಳ ಮಹತ್ತರಕೆ ಸಲ್ಲಿದ
ಗೌರವಾದರಮೆನೆ ವಿಶೇಷಮೇನಲ್ತು ಕಣಾ!
ಆ್ಯನಿಬೆಸೆಂಟ್ ಅನೇಕ ಚಳವಳಿಗಳಲಿ ಸ್ವತಃ
ಭಾಗವಹಿಸಿ, ಅನೇಕ ಸಲಿ ತುರಂಗವಾಸಮಂ
ಅನುಭವಿಸಿ, ಕೆಚ್ಚಿನಿಂ ಪುರ್ಚಿನಿಂ ಮುನ್ನುಗ್ಗಿ
ಜನರ ಹಕ್ಕು ಬಾಧ್ಯತೆ ಪಡೆಯೆ ಹೋರಾಡಿದಾ
ದಿಟ್ಟತನದ ಮಾನಿನಿ! ಭಾರತದ ವರ ಪುತ್ರಿ!
ಸತ್ಯಾನ್ವೇಷಕಿ ಆ್ಯನಿಬೆಸೆಂಟ್ ಥಿಯಾಸಫಿ
ಧರ್ಮವಂ ಜೀರ್ಣಿಸಿ, ಆನಂದ ಸಾರಮಂ
ಭಾರತೀಯರಿಗೆ ಅಮೃತದೊಲ್ ತಾಂ ಹಂಚಿ
ಚಿತ್ತಕಲ್ಪವರಳಿಸಿ ಮತಿಮೌಢ್ಯಮಂ ಕಳೆದು
ಉದ್ಧರಿಸೆ ಪಣತೊಟ್ಟು ಶ್ರಮಿಸಿದ ಧೀಮಂತೆ!
ಥಿಯಾಸಫಿಕಲ್ ಸೊಸೈಟಿಯ ಅಧ್ಯಕ್ಷ್ಯರಿರ್ದ
ಆಲಿಕಾಟ್ ಮರಣಿಸಲಾ ಅಧ್ಯಕ್ಷ ಪದಂ
ಹೆಗಲಿಗೇರೆ, ಅನಂತರಮಾ ಅವರಾಕಾರ್ಯ
ಭಾರವಿಮ್ಮಡಿಸಿ ಸರ್ವ ಸಾಹಸಾ ಹೆಣಗಿದರ್
ತಮಗಣಂ ಸೋಲಿಲ್ಲದವೊಲ್! ಎಲೆಡೆಯುಂ
ಧರ್ಮಪ್ರಚಾರ ಮಾತ್ರಮೇ? ಸತ್ಯಶೋಧನೆ
ಮೇಣ್ ಧರ್ಮಪ್ರಸಾರಮೆರಡುಂ ಜೀವನೀ
ಪಾತ್ರದಲಿ ಸರಸ್ವತಿ ನದಿಯೊಲ್ ಪ್ರವಹಿಸುತಿರೆ
ಬದುಕೇ ಒಂದು ತಪಶ್ಚರ್ಯೆ! ಮೇಣ್ ಆರಾಧನೆ!
ಇಂತಪ್ಪ ಪರಮ ಧ್ಯೇಯದಿಂ ಭಾರತ ಭುವಿಯ
ಸೇವೆಗೈದು ಉಪಕರಿಸಿದರ್ ಆ್ಯನಿಬೆಸೆಂಟ್!

ದೇಶೀಯ ನಾನಾ ಚಳವಳಿಗಳಲಿ ಮೈಗೊಂಡು
ಮತ್ತೆ ಮತ್ತೆ ತುರಂಗವಾಸಮಂ ಅನುಭವಿಸಿ
ಭಾರತ ತುರಂಗಗಳ ಅತಿಥಿಯೈಸಿ ತಮ್ಮಯ
ಸುಕೋಮಲ ದೇಹಸಂಪುಟಮಂ ದಣಿಸಿ ದಣಿಸಿ
ನೋವುನಿಡಿಗಳಂ ಹುಗ್ಗಿಯೊಲ್ ತಿಂದುಂಡು ತನು
ಮನ ಬಿರಿವನ್ನ; ಸಹನ ಶೀಲತೆಯಿಂ ಲೇಖನ ಕೃಷಿ
ಗೆಯ್ದು ಲೋಕದ ಜಡನಿದ್ದೆಯಂ ಬಡಿದೆಬ್ಬಿಸಿದ
ಘನ ಪಾಂಡಿತ್ಯ ನಿಧಿ ಮುನ್ನೂರು ಪುಸ್ತಕಗಳಿಗೂ
ಮಿಕ್ಕಿಮೀರಿ ಬರೆದು ಬರೆದು, ಲೇಖನ ಭಾಷಣ
ಮುಂತಪ್ಪ ಅದ್ಭುತ ಸೇವೆಯನೆಂತು ಗೆಯ್ದಳೋ,
ಆವ ದೈವಶಕ್ತಿ ಅವಾಹನೆಯಾದುದೊ ಎಂದು
ಅಚ್ಚರಿ ಬಡುವೊಲ್ ಶಕ್ತಿಸಂಚಯನಂ ದೇಹ
ದಾದ್ಯಂತಂ! ಎಂದುಮೆಂದಿಗೂ ಕೊನೆಗಾಣದಾ
ಕರ್ಮಚಾರಂ ಜನ್ಮಯೋಗವಲ್ಲದಿತರರ್ಗೆ
ಬಂದಪುದೆ ನೆರೆ ಕಲಿಪಿದೊಡಂ? ಆಚಂದ್ರಾರ್ಕ
ಕೀರ್ತಿ ಧವಳೆ! ದೀನರ ಜನನಿ ಆ್ಯನಿಬೆಸೆಂಟ್!

ಸರ್ ಸಾವಿರದೊಂಬೈನೂರೇಳರಲಿ ಕಾಂಗ್ರೆಸ್
ಇಬ್ಭಾಗವಾಗೆ ಆ್ಯನಿಬೆಸೆಂಟ್ ಮುಂಗೆತ್ತು
ಸರ್ವ ಪ್ರಯತ್ನದಿಂ ಒಗ್ಗೂಡಿಸಿ ರಾಷ್ಟ್ರದ
ಹಿತಕ್ಕಾಗಿ **All India Home Rule League**
ಸಂಸ್ಥಾಪಿಸಿ ಪಗಲಿರುಳ್ ಎಣೆಯಿಲ್ಲದೆ ದುಡಿದು
ಜನ ಸಂಘಟನೆ ಮಾಡಿದಳ್ ತಾನೇ ತಾನೈಸಿ!

ಸರ್ ಸಾವಿರದೊಂಬೈನೂರ ಇಪ್ಪತ್ತೊಂದರಲಿ
ರಾಷ್ಟ್ರ ಮುಕ್ತಿಗಾಗಿ **National Convention**
ಎಂಬೊಂದು ಆಂದೋಲನವಂ ಹೂಡಿ ಜನತತಿಗೆ
ಮಾರ್ಗದರ್ಶನಮಿತ್ತರ್ ಲಂಡನ್ ಸಂಜಾತೆ!

ಭಾರತೀಯರೇಳ್ಗೆಗೆ ಎನಿತೆನಿತು ದುಡಿದೊಡಂ
ಸಾಗರದಿ ಸಿರಿಗಂಧ ತೇಯ್ದುವೊಲಲ್ತೆ ಯೋಜಿತ
ಉದ್ಧರಣ ಕಾರ್ಯಂ! ಆ್ಯನಿಬೆಸೆಂಟ್ ಅದನಿನಿತು
ಗಮನಿಸದೆ **The Society for the Promotion of National Education**
ಎಂಬೊಂದು ಸಂಸ್ಥೆ ಭಾರತೀಯರ ಉದ್ಧರಣ
ಮೇಣ್ ಜಾಗತಿಕ ಜೀವನಂ ರೂಪಿಸಲ್ಕೆ,
ಇನ್ನೊಂದು ರಾಷ್ಟ್ರೀಯ ವಿದ್ಯಾಲಯವಂ
ಸಂಸ್ಥಾಪಿಸಿದರ್ ಉದ್ಧರಣಮಂ ಉದ್ಧರಿಪ
ಸಾಹಸದೊಳ್! ಇತಿಮಿತಿಯಿಲ್ಲದಾ ಯೋಜನೆಗೆ
ಸಾಧನೆಯ ಸಾಧ್ಯತೆ ಅತ್ಯಲ್ಪಮಿರೆ ಧೃತಿಗೆಡದೆ
ತನುದಣಿಯೆ ಶ್ರಮಿಸಿದರ್ ಪೆತ್ತಮ್ಮೆಯ ಭಾವನೆ
ತುಂಬಿ ಹೃದಯ ಮಂದಿರದಲಿ ನಿಜ ಪ್ರೇಮದಿಂ!
ಮತ್ತಮಾ **All India Boy's Scouts Association Commissioner** ಹುದ್ದೆಯಂ
ನಿರ್ವಹಿಸಿ ಸೇವೆಯಂ ಶ್ರದ್ಧೆ-ನಿಷ್ಠೆಗಳಿಂದ
ಸಮಸ್ತ ಭಾರತೀಯರ್ ಎಂದುಮೆಂದಿಗೂ
ಮರೆಯಲಾರದನಿತು ಸತ್ ಸೇವಾ ಕಾರ್ಯಮಂ
ಗೆಯ್ದುಪಕರಿಸಿದ ಮಾನಿನೀ ದೇವಮಾತಾ!

ಎನಿತೆನಿತು ಪತ್ರಿಕಾ ಪ್ರಪಂಚದೊಳ್ ಶಕ್ತಿ
ಮೀರಿ ಶ್ರಮಿಸಿ ಭಾರತ ಜನಕೋಟಿಗೆ ತಮ್ಮ
ಬೌದ್ಧಿಕ-ಅನುಭಾವಿಕ ಜ್ಞಾನಧಾರೆಯನೊರೆದು
ಭಾರತಭುವಿಗೆ ಅನನ್ಯ ಅನುಪಮ ಸೇವೆಯಂ
ಸಲ್ಲಿಸಿದುದು ಐತಿಹಾಸೀಯ ಪುಟಗಳಲಿ
ಸುವರ್ಣಾಕ್ಷರಗಳಿಂ ಉಲ್ಲೇಖಿಸಿ ನಿಚ್ಚಮೆಲ್ಲರ್
ಪ್ರಾತಃಸ್ಮರಣೆ ಮಾಡುವಂತಹ ವರ ಸೋದರಿ!

ಪರಸೇವೆಯೊಳ್ ಒಡಲ ಸಂಜಾತರಂ ಪೂರ್ಣ
ಮರೆತು ಪ್ರೇಮದಿಂ ವಂಚಿತರಾದ ದುಃಖಮಂ
ಒಮ್ಮೆ ಇಂತೆಂದು ತೋಡಿಕೊಂಡಿರ್ಪರ್ ಮಿಣ್ಣನೆ
''ಸ್ವಂತಿಕೆ ತೊರೆದು ಪ್ರೇಮದಿಂದೂರ್ಡೈದುದರಿಂದೆ
ಸಹಸ್ರಾರು ನಿರ್ಗತಿಕ ಮಕ್ಕಳಿಗೆ ಪ್ರೇಮದ
ಜನನಿಯಾಗಲ್ಕೆ ಸಾಧ್ಯವಾಯಿತೆನಲಕ್ಕುಂ!''
ಇಂತಪ್ಪ ಮಹಾ ಮಾತೃಕೆ ಶಾಕಾಹಾರಿ!
ಶುದ್ಧ ಶುಭ್ರ ಸಾತ್ವಿಕ ಮನೋಭಾವದಾ
ಪರಮ ಪುಣ್ಯಾವನಿ!
ಪಶುಸಂಗೋಪನೆ ಮೇಣ್
ಅತಿ ನಿಕೃಷ್ಟ ಜೀವಿಗಳೊಡಂ ತಾದಾತ್ಮ್ಯಭಾವ
ಸ್ಫುರಿಸಿ ಸದಾ ಹಸನ್ಮುಖದಿಂ ಸಹಕಾರವ
ನೀಡಿ ಮಾನವೀಯತೆ ಏನೆಂಬುದಂ ಸ್ವತಃ
ಸತ್ಕೃತಿಯಲಿ ಪಾಠಗಲಿಸಿದ ಕರ್ಮಚಾರಿಣಿ!
ಗಲ್ಲು ಶಿಕ್ಷೆ, ಶ್ರಮಿಕರ ಅನ್ಯಾಯ, ಗುಲಾಮಗಿರಿ
ಮುಂತಪ್ಪ ಅನೀತಿ ಅಧರ್ಮಗಳ ವಿರುದ್ಧಂ
ಸೊಲ್ಲೆತ್ತಿ ಗುಲ್ಲೆಬ್ಬಿಸಿದರ್ ಮೇಣ್ ನಾಲ್ಪನ್
ಪೆಂಪ್ಲಿಟದ ಮುಖೇನ ಜನಸಂಖ್ಯಾಸ್ಫೋಟನೆಗೆ
ಮೇಣ್ ಸಂತಾನ ನಿರೋಧಗಳಂ ತಾಂ ಕಟ್ಟಾ
ಪ್ರತಿಪಾದಿಸಿ ಕಾನೂನಿನ ಬೆಂಬಲಂ ಪಡೆದ ಸತಿ!
ಆನಿಬೆಸೆಂಟರ ಶರೀರಮಂ ಮುಪ್ಪಾವರಿಸೆ
ವಯೋಧರ್ಮದಿಂ, ಆಗಳಾದೇಹದಂತರ್ಗತ
ದಿವ್ಯಾತ್ಮರನ್ನಗನ್ನಡಿಯೊಲ್ ಬೆಳಗುತಿರಲ್
ಮಾನಸಿಕ ಶಕ್ತಿಯಿನಿತು ಕುಗ್ಗದೆ ಮತಿಯಣಂ
ತಗ್ಗದೆ, ನೆರೆ ಬಂದ ಅಬಲೆಯರಂ, ಕರ್ತವ್ಯ
ಚ್ಯುತರಂ, ತಿರ್ದಿ ತಳ್ಕೈಸಿ, ಪಥಚ್ಯುತರಂ

ನೇರ್ಪಡಿಸಿ ಬೋಳೈಸುವುದರೊಳ್ ಅಂತರಂಗವ
ತೆರೆದಿಡುವನಿತಮಮು ಸತ್ಯಂ ಶಿವಂ ಸುಂದರಂ!
ಭಾವನೆಯ ಮಧುರ ಮನೋಹರೆ ಆ್ಯನಿಬೆಸೆಂಟ್!

ಸರ್ ಸಾವಿರದೊಂಬೈನೂರ ಮೂವತ್ತಮೂರು
ಸೆಪ್ಟೆಂಬರ್ ಇಪ್ಪತೊಂದರಂದು ಅವರ ದಿವ್ಯ
ಆತ್ಮ ಚೇತನ ಪರಮಾತ್ಮನಲಿ ಲೀನವಾಗಿ
ಪಾರ್ಥಿವ ಶರೀರ ಭೂತಾಯಿಯುಡಿಯ ಮಣ್ಣ
ಹುಡಿಯಲಿ ಸೇರಿ ಈ ಪ್ರಪಂಚದ ನೆಲೆಯಿಂ
ದೂರದೂರಮಾದೊಡಂ ಆ ದಿವ್ಯಾತ್ಮ ಪರಿಮಳ
ಅಜರಾಮರ ಕೀರ್ತಿ ಪರಿಮಳಿಸುತಿಹುದೀ ಭೂ
ಲೋಕದಲಿ ಎಂದುಮೆಂದಿಗೂ ಡಾ|| ಆ್ಯನಿಬೆಸೆಂಟ್
ಪವಿತ್ರನಾಮ ಚಿರಂತನಗೊಳಿಪಂತೆ ಕಣಾ!

ತಾಯೆ ! ನಿನ್ನ ಚೇತನದ ಸಿಂಧುವಿನಲ್ಲೊಂದು
ಬಿಂದು ಮಾತ್ರಮೀ ಹೃದಯಾಬ್ಧಿಯಲಿ ಮಥಿಸಿ
ಸಾಕ್ಷಾತ್ಕರಿಸಿದ ರಸ ಚೇತನ ಬಿಂದು ಉಕ್ಕುಕ್ಕಿ
ಹರಿದುದೀ ಕಿರುಕಥನ ಕವಯಿತ್ರಿಯ ಮನದುಂಬಿ!

— ೦ —

# ಬಕಾಸುರ

ಏಕ ಚಕ್ರನಗರಿಯ ಛತ್ರದೊಳ್ ತಂಗಿರ್ದ
ಪಾಂಡವರ್ ಸ್ವಚ್ಛವಸತಿಯನರಸುತ ಊರೊಳ್
ವೀಥಿವೀಥಿಯಂ ಸುತ್ತುತಿರೆ ಕೇಳ್ದುದೊಂದೆಡೆ
ಗೋಳ್ದನಿ ಕರುಳ್ ಕರಗುವಂದದಲಿ! ಆಗಳುಂ
ಮನಮರುಗಿದ ಪಾಂಡವರ್ ಮಾತೆಯ ಸಹಿತ ಆ
ಕುಟೀರಮಂಬೊಕ್ಕು ಏನೆಂದು ಕೇಳಲಾಗಳ್
ಪಿರಿಯ ಬ್ರಾಹ್ಮಣಂ ಕಡು ದುಃಖದೊಳ್ ಪೇಳಿದಂ,
''ಅಯ್ಯಾ, ಸುಜನರೆ! ಈ ದೆಸೆಗೆಟ್ಟ ರಾಜ್ಯದಾ
ಗೋಳನೇನೆಂದು ಬೆಸಗೊಳ್ವೆಂ ಇದೆಂದಿಗುಂ
ಬಗೆಹರಿಯದ ಸಂಕಷ್ಟಂ! ಹಾ, ನಮೆಯಲಾರೆ;
ನೋಯಲಾರೆ. ಆನುಂ ಜೀವತೆತ್ತೊಡೆ ಮಡದಿ
ಮಕ್ಕಳೆಲ್ಲರ್ ಪಿಂಬಾಲಿಪರ್. ಇದರೊಳಾನು
ಏಂಗೈಯಲಕ್ಕು?'' ಎನುತ ಬಾಯ್ಬಿಟ್ಟು ಹೋಯೆಂದು
ಅಳಲುಪಕ್ರಮಿಸಿದಂ. ಆಗಳಾ ಕುಂತಿ ತಾಂ
ಬಳಿಸಂದು ಸಂತೈಸಿ ನಲ್ಮೆಯಿಂ ಬಲ್ಮೆಯಿಂ
ಕೇಳಿಸಿದಳಿಂತು ''ಅಯ್ಯಾ, ಬ್ರಾಹ್ಮಣ! ಎನ್ನಯ
ಕುವರರ್ ಅತಿ ಶೂರರ್! ನಿನ್ನ ಸಂಕಷ್ಟಮಂ
ಎಂತಾದೊಡಂ ಪರಿಹರಿಪ ಶಕ್ತಿಯುಳ್ಳವರ್.
ನೀಂ ನಿಮ್ಮ ಎಡರ್ ತೊಡರುಗಳೇನಿರ್ದೊಡದಂ
ತಳ್ವದೆ ಬೆಸಗೊಳ್ವುದು.''
ಅದರ್ಕಾ ಬಡ ಬ್ರಾಹ್ಮಣ-
ಬ್ರಾಹ್ಮಣಿಯರ್ ಮೇಣ್ಮಕ್ಕಳ್ ಬಿಕ್ಕಿ ಬಿಕ್ಕಳುತ
ತಮ್ಮ ಗೋಳನೆಲ್ಲಂ ಒರೆದರೊಗ್ಗಟ್ಟಿನಲಿ.

''ಅಮ್ಮ, ತಾಯೆ! ಈ ಊರ ಪರಿಸರದೊಳ್ ಕೂರ
ರಾಕ್ಷಸನೊರ್ವ ನೆಲೆನಿಂದು ಸತತ ಊರಿಂಗೆ
ಪೆರ್ಮಾರಿಯಾಗಿರ್ದಪಂ. ಕೇಳ್, ಅವಂಗೂರ
ಲೋಗರ್ ದಿನಕ್ಕೊಂದು ಮನೆಯಲಿ ಭೂರಿ ಭೋಜನ
ನೀಡವೇಳ್ಕುಮೆಂದೆಂಬೊಂದು ಒಪ್ಪಂದದಾ
ನಿಯಮದೊಳ್ ಕಾಲಯಾಪನೆಗೈಯ್ಯುತಿರ್ಪರ್.
ಭೂರಿ ಭೋಜನಂ ಜೋಡೆತ್ತಿನ ಗಾಡಿಯೊಳಿರ್ಕಿ
ಓರ್ವ ಸಾರಥಿಯಂ ಕಳುಹಲಕ್ಕು ಊರಿನ
ಪೊರವಲಯದ ಬಯಲ್ಗೆ! ಆಗಳಾಂ ರಕ್ಕಸಂ
ಅಲ್ಲಿಗೈದು ಗಾಡಿಗನಂ, ಜೋಡೆತ್ತುಗಳಂ
ಮತ್ತಮಾ ಭೂರಿ ಭೋಜನಂಮೊಂದೆ ಬಾರಿಗೆ
ಮುಗಿರ್ಚಿ ಬಿಡುವಂ ಕಾಣ್! ಇಂತೀವೊಂದು ಕಡು
ಕಷ್ಟದ ಸರದಿಯೆಮ್ಮ ಪಾಲಿಂಗೆ ಒದಗಿರ್ದು
ಎಂತು ಸೈಪುವೆಂ ಪೇಳ್?'' ಎಂದೆಂದು ಗೋಳಿನ
ಕರುಣ ಕತೆಯನೊರೆದು ಮುಗಿಸುವನಿತರೊಳ್ ಮತ್ತೆ
ದುಃಖವುಮ್ಮಳಿಸಿ ಗೋಳಾಡಿ ಕಂಬನಿ ಸುರಿಸಿ
ಅಳಲ್ದರ್ ಒಡಲ ಸಂಕಟವನೆಲ್ಲಂ ಒರ್ಮೆಗೆ
ಚೆಲ್ಲಿ ಸೂಸುವಂದದಿ. ಇಂತವರ ದುಃಖಮಂ
ಅರಿತು ನೊಂದು ಕುಂತಿದೇವಿ ತಾಂ ಸುತರೊಡಂ
ಮಾತಾಡಿ ಏಂಗೈವುದೆಂದು ಕೇಳಲ್ಕವರ್
ಭೀಮಸೇನನಂ ಕಳಿಪಿ ಬ್ರಾಹ್ಮಣ ಕುವರನಂ
ಪಿಂತಿರ್ಕಿ ಪ್ರಾಣರಕ್ಷಣೆಗೈವುದೆಂಬೊಂದು
ನಿರ್ಣಯದೊಳ್ ಮನವಿಟ್ಟು ನುಡಿದರಾ ಬ್ರಾಹ್ಮಣ-
ಬ್ರಾಹ್ಮಣಿಯರ್ಗೆ ನಲ್ನುಡಿಯೊಳ್ ''ಕೇಳ್, ಬಂಧುಗಳೇ!
ನೀಮಿಂದು ಭೂರಿ ಭೋಜನ ತುಂಬಿ ಗಾಡಿಯಂ
ಸಿದ್ಧಗೊಳಿಸಿದೊಡೆ ನಿಮ್ಮ ಕುವರನ ಬದಲಾಗಿ

ಭೀಮಸೇನಂ ಗಾಡಿಯಂ ಪೊಡೆಕೊಂಡಲ್ಲಿಗೆ
ಪೋಗಲಡ್ಡಿಯೇನಿಲ್ಲಂ; ಇದಂ ಬರಿಯ ಪುಸಿ
ಯೆನ್ನದೆ ಡಾಂಭಿಕತೆಯೆನ್ನದೆ ನಮ್ಮ ಮಾತಿನೊಳ್
ಶ್ರದ್ಧೆಯಿಟ್ಟು ಭೋಜನದ ಗಾಡಿಯಂ ಈಗಳೆ
ಸಿದ್ಧಗೊಳಿಸಿ'' ಎಂದು ಬೆಸಸಿದರೆಲ್ಲರೊಟ್ಟಿನಲಿ.

ಆಗಳಾ ಬ್ರಾಹ್ಮಣಿಯು ಪೂಜ್ಯೆ ಕುಂತಿದೇವಿಯ
ಕೃಪೆಯಿಂ ಬಡವಂಗೆ ಅದ್ಭುತ ನಿಧಿಯ ಗಡಿಗೆ
ಕೈಗೂಡಿ ಬಂದವೊಲ್ ಸಂತಸಬಟ್ಟೊಡಂ,
ಕುಂತಿಯುಂ ತನ್ನವೊಲ್ ಪೆತ್ತ ತಾಯಾಗಿರಲ್
ಇಂತೆಂದು ಕಳಿಪುವೊಳ್ ಅರ್ಭಕಂ ಎನುವೊಂದು
ಚಿಂತೆಯೊಳ್ ಮನವಿಟ್ಟು ಕೇಳಿದಳ್ ''ಎಲೆ, ತಾಯೆ!
ನೀನಿಂತೆಂತೀ ಗಂಡದೊಳ್ ಪೆತ್ತರ್ಭಕನಂ
ನೂಂಕುತಿಹೆ? ಇನಿತೊಂದು ನಿಶ್ಚಿಂತೆಯಿಂ ಕೂರ
ರಕ್ಕಸನೆಡೆಗೆ ಕಳುಹಿಸಲ್ ನಿನ್ನ ಮನವೆಂತು
ಸಂತು ಪೇಳ್! ಇಂತಿದಂ ಕಂಡೆನ್ನ ಕರುಳ್‌ಕುಡಿ
ಸುಟ್ಟುರಿದು ಕೋರ‍್ಯೆಸುವೊಲ್ ತೋರುತಿರ‍್ಕುಂ!
ಆನಿನ್ನೆಬರನಿದನೆಲ್ಲಿಯುಂ ಕಂಡೆನಿಲ್ಲಂ.
ಕೇಳ್ದೆನಿಲ್ಲಂ.'' ಎನುತಚ್ಚರಿ ತುಂಬಿ ತುಳುಕುತಿಹ
ನಿಡುಗಣ್ಣಳಿಂ ನೋಡಿದಳ್ ಬೆಕ್ಕಸಂಬಟ್ಟು.

ಅದರ್ಕಾಮಾತೆ ಕಿಂಚಿತ್ ಕುಗ್ಗದೆ ನೋಯದೆ
ನಿರಾಕುಳದಿಂ ನುಡಿದಳ್ ''ನೀಂ ಕೇಳೆಲೆ, ತಾಯೆ!
ಈವೊಂದು ವಿಚಾರದೊಳಾನುಂ ಪರಮಧನ್ಯೆ!
ಎನ್ನ ಸುತರ್ ಶೂರಾಧಿಶೂರರ್! ಎಂತಪ್ಪ
ರಣಪಂಡಿತರ‍್ಗಂ ಪಿಂಜರಿದರಿಲ್ಲಂ ಏಗಳುಂ
ಸೋಲೆಂಬುದಿವರ ಬಳಿಯಲಿ ಸುಳಿಯಲಿಲ್ಲಂ!
ಇಂತಿದರೊಳೆನ್ನ ದ್ವಿತೀಯ ಕುವರಂ ನೀಂ

ಕಂಡೆಯಲ್ತೆ? ಈ ಕಟ್ಬಾಳ್ತನದ ಭೀಮನಂ
ಜಯಿಸುವವರ್ ಈ ದಿಶೆಯೊಳಾರಿಲ್ಲಂ ಇದಂ
ಮನದೊಳಿಟ್ಟು ಕಿಂಚಿತ್ ತಳ್ವದಿರ್.''
ಅಂತೆಂದು
ಪೊಣ್ಮಿದ ವೀರರಸಾನ್ವಿತ ನುಡಿಯಂ ಮನದುಂಬಿ,
ಮಾನಿಸಿ ಬ್ರಾಹ್ಮಣ-ಬ್ರಾಹ್ಮಣಿಯರ್ ಅತ್ಯಾನಂದ
ಭೋಗದಿಂ ಮರವಟ್ಟವೊಲ್ ಮೂಜಗಂ ಮರೆತು
ಕುಂತಿಯಂ ನುತಿಸಿ ಪಾಡಿ ಪೊಗಳುತ ಕೈಮುಗಿದು
ಕಾಲ್ವಿಡಿದು ಅಡ್ಡಬಿಳ್ದು ಮನವೆರ್ಚಿ ಮೈವೆರ್ಚಿ
ತಮ್ಮ ಶಕ್ತಿಯಂ ಮೀರ್ವ ಬಂಡಿಯೊಳ್, ಸಕಲತರ
ಭೂರಿ ಭೋಜನದುಂಬಿದ ಪಾತ್ರೆಗಳಂ ಪೇರಿಸಿ
ಭೀಮಸೇನನಿಗೆಂದರ್ ''ಅಯ್ಯಾ, ಭೀಮಸೇನ!
ಬಂಡಿಯಿದು ಸಿದ್ಧಮಿರ್ಪುದು ಪೋಗಿ ಬಾರಯ್ಯ!
ನಿನಗೆ ಜಯಮಕ್ಕೆ! ಗೆಲಮಕ್ಕೆ! ನಿನ್ನಿಂದಲೆಮ
ನಗರಿಯಾ ಕೂರ ಕಂಟಕಂ ಪರಿಹಾರಮಕ್ಕೆ!''
ಆಗಳಾ ಭೀಮಸೇನಂ ನಗುನಗುತ ಬಾಹು
ಬಲದ ಪುರುಪಿನೊಳ್ ಹಿಗ್ಗಿ ''ಧೂರ್ತ ಕಕ್ಕಸ
ವಗೆಯ ಬಕಾಸುರನಂ ಎದುರ್ಚಿ ಪೊಯ್ದು ನುಚ್ಚುನುರಿ
ಗೆಯ್ದು ದೇಶಿಗರ ಕಂಟಕಂ ತೊಡೆಯದೆ ಬಿಡೆ''
ಎಂದು ತನ್ನೊಳ್ ಪೂಣ್ದು ಗಾಡಿಯಂ ಪೊಡೆದನಯ್
ಪೊರವಲಯದ ಕರ್ವೆಟ್ಟಿನ ಪದತಲಕೆ. ಆಗಳ್
ಜೋಡೆತ್ತುಗಳಂ ಕೊರಳ್ಗೆಜ್ಜೆಗಳ್ ಅಲುಗಿ ಗಲ್
ಗಲ್ಲೆನಲ್, ತಾಂ ಅಣಕಿಸುವ ಪಾಂಗಿನಿಂ ಪೇರ್
ದನಿಯೊಳ್ ಹುಯ್ಲಿಡುತ ಭೀಮಸೇನನಾಗಾಡಿ
ಯಿಂದಿಳಿದು ಎತ್ತುಗಳ ನೊಗವಗಳಚಿ ಮೇಯಲು
ಬಿಟ್ಟು ಓ! ಬಕಾಸುರ! ಬೇಗ ಬಾರಯ್ಯ! ನೀಂ

ತಳ್ವಿದೊಡೆ ಈ ಭೋಜನಮನ್ಯರ ಪಾಲಪ್ಪುದು!
ಬೇಗಾ ಬಾ!'' ಎಂದೆಂದು ಕೂಗಿ ಕರೆಯುತ ತಾನೆ
ಭೂರಿ ಭೋಜನಂ ಮಹದಾನಂದದಿಂದುಂಡು
ಮುಗಿರ್ಚೆ ಪಾತ್ರೆಯ ತಳದಲಿ ಅಂಟಿರ್ದೆಲ್ಲ
ಉಣಿಸಂ ಎರಡು ಹಸ್ತಗಳಿಂ ಬಳಿದು ನಾಲಿಗೆ
ಚಾಚಿ ನೆಕ್ಕುತ ಮತ್ತೆ ಕೂಗಿ ಕೇಳಿಸಿದಂ ''ಓ!
ಬಕಾಸುರ! ಬೇಗ ಬಾ!''
ಅಂತೆಂದ ಮಾತುಗಳ
ಆಲೈಸಿದ ಬಕಾಸುರಂ ಇದೇನಿಂದಿದು ಪೊಚ್ಚ
ಪೊಸ ಮಾಳ್ಕೆಯೆಂದು ತನ್ನೊಳೆ ಕಟ್ಟಚ್ಚರಿವಟ್ಟು
ರೋಷ ಭೀಷಣತೆಯಿಂ ರೊಚ್ಚಿಗೆದ್ದು ಒಂದೇ
ಬಾರಿ ಪೊಯ್ದಪ್ಪಳಿಸಿ ಕೊರ್ಚಿ ಕಂಡರಿಸುವವೊಲ್
ರುದ್ರ ಭೀಕರನಾಗಿ ಮೇಲಾಯ್ದು ಬರುತಿರಲ್
ಭೀಮಸೇನಂ ಅಟ್ಟಹಾಸದಿಂ ''ಬಕಾಸುರ!
ನಿಲ್, ನಿಲ್! ಅರೆಚಣದೊಳ್ ಬಂಡಿಯಂ ಸ್ವಚ್ಛಗೈದು
ಬಂದಪೆಂ!'' ಎನುತೆ ಮತ್ತೆ ಮತ್ತೆ ಕೈನೆಕ್ಕಿದಂ!
ರಾಕ್ಷಸ ವೈರಿಯಂ ಕೆರಳಿಸುವ ಹುಮ್ಮಿನಲಿ!
ಅದಂ ಕಂಡ ಬಕಾಸುರಂ ಕೆರಳ್ದು ಕಿಡಿಕಿಡಿ
ಯಾಗಿ ಘೋರ ರೂಪಿನಿಂ ಮುನ್ನುರ್ಗಿ ಕುಪ್ಪಳಿಸಿ
ಪುಟನೆಗೆದ ಚೆಂಡಿನೊಲ್ ಧಾವಿಸಿ ಬರತಿರ್ದುದಂ
ಕಂಡ ಭೀಮಸೇನಂ ಪುರುಪಿನಿಂ ಬಾಯ್ದೆರೆದು
ನಾಲಿಗೆ ಚಾಚೆ ಮತ್ತೆ ನೆಕ್ಕಿದಂ, ರಕ್ಕಸನೊಡಲ
ಕಿರ್ಚಿನಾ ಬಡಬಾಗ್ನಿಗೆ ನೆಯ್ಯನೆರೆಯುವಂತೆ!
ಆಗಳಾ ರಕ್ಕಸಂ ಪಲ್ಕಡಿದು ಕೆಕ್ಕರಿಸಿ
ನೋಡಿ ಕಿಡಿಗಳಂ ಕಾರ್ದು ವೈರಿ ಮನೋಭಾವದಿಂ
ಭಯಂಕರನಾಗಿ ಅಬ್ಬರಿಸಿ ಬಿರುಗಾಳಿಯೊಲ್

ಮೇಲಾಯ್ತು ಬಂದು ಭೀಮನ ಬೆನ್ನಮೇಲೆ ದಿಡ್
ದಿಡ್ಡನೆ ಜಡಿಗುದ್ದಿದಂ! ಆದೊಡಂ ಆ ಧೀರ
ವಾಯುಸುತನೆಂದಾದೊಡಂ ಅಂಜುವನೆ ದುಷ್ಟ
ಬಕಾಸುರ ಮುಷ್ಟಿಯ ಹುಲು ಘಾತಕ್ಕೆ? ತೆಕ್ಕನೆ
ತಿರುಗಿ ಅಪ್ಪಳಿಸಿದನವಂಗೆ ಬಿಗಿ ಮುಷ್ಟಿಯೊಳ್!
ಆಗಳೀರ್ವರುಂ ಮುಷ್ಟಾ ಮುಷ್ಟಿಯೊಳ್ ಸೆಣಸಿ
ಕಾದಾಡಿ ಕಾಳಗ ಬಿಸಿಯೇರೆ, ಬಕಾಸುರಂ
ಸಲಸಲಂ ಮುಷ್ಟಿಘಾತಕ್ಕೀಡಾಗಿ ನೊಂದು
ಹಠದಿಂ ಛಲದಿಂ ರೋಷದಿಂ ಗರ್ಜಿಸಿ ನುಗ್ಗಿ
ಸಾಸದಿಂ ಮಾಯದಿಂ ಚಂಗನೆಯ ಚಿಮ್ಮಿಪುಟ
ನೆಗೆದು ಉಬ್ಬೆಗದಿಂದೆ ಜಡಿದಾರ್ದು ಶಕ್ತಿಯಿಂ
ಯುಕ್ತಿಯಿಂ ಚಾತುರ್ಯದಿಂ ಸೆಣಸಿ ಸೆಣಸಿ ಮೈ
ಕೈಸೋತು ಬಲಂ ಕುಗ್ಗಿ ಕುಂದಿ ಕೈಲಾಗದೆ
ಪೆರ್ಮರನ ಕೊಂಬೆಯಂ ಮುರಿದು ಕೊಂಡೈತರಲ್
ಭೀಮಸೇನನದ ಕಂಡು ಪ್ರತಿಯಾಗಿ ತಾನೊಂದು
ಪೆರ್ಮರವಂ ಬುಡಸಹಿತ ಕಿತ್ತು ತಂದವ್ವಳಿಸಿ
ಒರ್ಮೆಗೇ ನುಚ್ಚು ನುರಿಗೈದನಾ ರಾಕ್ಷಸ
ಬಕಾಸುರನಂ! ಆಗಳವಂ ಪೇರ್‌ದನಿಯೊಳ್
ಒರಲ್ದು ಧರೆಗುರುಳಿ ಒದ್ದಾಡಿ ಪ್ರಾಣವಂ ಬಿಡೆ
ದೇವ ದುಂದುಭಿ ಮೊಳಗಿ ಪುಷ್ಪವೃಷ್ಟಿಯಾದುದು
ಗಗನದೇಶದಿಂ ಭೀಮಸೇನನಾ ಶಿರದೊಳ್!
ಓವೊ! ಇಂತಪ್ಪ ಕಥನ ಮಂಥನದಿಂದೆನ್ನ
ಲೆಕ್ಕಣಿಕೆಯ ಮಸಿಯೊರತೆಯು ಪರಿದುದು ಸರಾಗ
ಹೃನ್ಮನಂ ದಳದಳ ಅರಳ್ದು ಪೂವಾಗುವವೊಲ್!

— o —

# ಮೀರಾ ದುರಂತಂ

ಸೃಷ್ಟಿ ಬ್ರಹ್ಮನ ಕಮಂಡಲು ತುಂಬಿ ತುಳುಕಿತೆನೆ
ಮುಂಬೆಳಕಿನ ಕಿರುಗಾಂತಿ ಮೂಡಣದಂಚಿನಲಿ
ಪರ್ವಿದತ್ತು; ಅನಂತ ಸೃಷ್ಟಿ ನಿಸ್ತರಂಗಿತ
ಮಹಾ ವಿಸ್ತಾರದಲಿ. ಪೂರ್ವಿ ನೀಲ ಭಿತ್ತಿಯ
ಸೀಮಾ ಕ್ಷೇತ್ರದಂಚಲ ಮುಗಿಲ್ಮಂಜು ಪೊದಳ್ದು
ರಜತವಾರಿ ಪರಿದೊಲ್ ಧವಳ ಕೀರುತಿ ಚೆಲ್ಲಿ
ಮಂದೈಸಿದುದು. ಸಕಲತರ ಪಕ್ಷಿಗೊರಳಿಂದೆ
ಉದಯಗಾನ ರಾಗಾರುಣರಾಗದಿಂದುಣ್ಮೆ
ಹೃನ್ಮನಂ ಭಕ್ತಿಭಾವದಿಂ ತುಂಬಿ ತುಳುಕಲ್
ಮೂಡುವೆಟ್ಟಿನ ಮೇಲೆ ತ್ರಿಲೋಕದೈಸಿರಿಯೆ
ಮೂಡಿದವೊಲ್ ಮೂಡಿದನದೋ ಬಾಲಕೋಮಲ
ಶಿರೋಮಣಿ! ಪ್ರಾತಃಪುಷ್ಪಗಂಧ ಘಮಘಮಿಸುತ
ತಂಗಾಳಿಯಲಿ ಪರ್ವಿ ದಿಶೆಯಿಂ ದಿಶೆಗೆ ಮುಟ್ಟಿ
ಭ್ರಮಂತ ಭ್ರಮರಗಳ್ ಪೂವಿಂ ಪೂವಿಂಗೆ
ನಲಿಯುತ ಪಾರ್ದು ಮಧುವಂ ಪೀರ್ದುರ್ಬಿ ಮುದದಿಂ
ಝೇಂಕರಿಸೆ ವನಧಾಮದೊಲುಣ್ಮಿತು ಓಂಕಾರ!

ನಾಡಿನ ರಣರಂಗದೊಳ್ ಮೈಕೈ ಗಾಯವಟ್ಟು
ಬಸಿದ ಕೆನ್ನೆತ್ತರ್ ಸಹಿತ ರಾಮಧನಿ ಸ್ವಂತ
ವೀಡಿಗೈಯೆ 'ಮೀರಾ' ಎಂಬ ಅಶ್ವಾರೋಹಿ
ತಾನಾಗಿ, ತಲೆಬಾಗಿಲಲಿ ಮಕ್ಕಳೊಡಗೂಡಿ
ಕಾದಿರ್ದ ಸತಿ ಕರುಣ ಕಾತರದಿ ಮನನೊಂದು
ಬೆಂದು ಬೆಬ್ಬಳಿಸಿ ಸ್ವಾಗತಿಸಿದಳ್ ಕಣ್ಣೀರ್
ತುಂಬಿ. ರಾಮಧನಿ ಕುದುರೆಯಂ ನೆಳಲೊಳ್ ಕಟ್ಟಿ

ತಲೆಯಂ ನಿಳುಪಿ ಮೈದಡವಿ ತಟ್ಟಿ ಮುದ್ದಿಟ್ಟು
ಪುಲ್ಲು ನೀರ್ ನೀಡಿ ಉಪಚರಿಸಿದಂ. ಹಾಲೊಳ್
ಮಿಂದವೊಲ್ ಧವಳ ಕಾಂತಿಯಿಂದೊಪ್ಪುವಾ ಸೆಳೆ
ಮಿಂಚುಮೈ. ಮುತ್ತೈದೆಯ ಕುಂಕುಮ ಬೊಟ್ಟಿನೊಲ್
ಕಂಗೊಳಿಪ ಚೆಂಗಾವಿ ಚುಕ್ಕಿ ಶೈಲಿ ಹಣೆಯಲಿ;
ನೋಳ್ಪ ಕಣ್ ಮೆಚ್ಚುವನಿತು ಮೋಹಕಂ ಕಣಾ!
ಸೋತು ಬಳಲಿ ಬೆಂಡಾದ ರಾಮಧನಿ ಮೆಲ್ಲನೆ
ಒಳ ಬರಲ್ ಮಡದಿ ಕೈಕಾಲ್ಗೆ ಬಿಸಿನೀರಿತ್ತು
ಕೆನೆವಾಲ್ ನೀಡಿ ಶೈತ್ಯೋಪಚಾರಂಗೈದು
ಬಿಷಗ್ರತ್ನರಿಂ ಓಷದಿಯಂ ತಂದು ಗಾಯಕೆ
ಬಳಿದು ನೆರೆಯುಪಚರಿಸುತಿರಲ್; ದಿನದಿನಂ ಪಿರಿ
ಗಾಯಗಳ್ ಮಾದೊಡಂ ಕೈವೆರಳ ಗಾಯಗಳ್
ಮಾಗದೆಯೆ ನಂಜೇರಿ ಕೊಳೆತು ಗೆಂಟು ಗೆಂಟಿಗೆ
ತುಂಡಾಗಿ ಕಜ್ಜಕ್ಕೆರಮಾಗಿ ಕಡು ದುಃಖಕೆ
ಕತಮಾದುದು. ರಾಮಧನಿ ಏಂಗೈವುದೆಂದೆಂಬ
ಚಿಂತೆಗೆತ್ತು ಬಳಲ್ದು ದಿನದಿನಂ ಬಡತನಂ
ಬಲಿಯುತಿರೆ ಭಂಗಬವಣೆಯ ಇರ್ಕುಳದಿ ಸಿಲ್ಕಿ
ನರಳುತಿರ್ದಂ ಬೇರೆ ಗತಿಗಾಣದೆ. ಮೈಬಲಂ
ಕುಗ್ಗಿ ಮನಬಲಂ ತಗ್ಗಿ ತತ್ತರಿಸಿತಾತ್ಮನ
ಬಲಂ. ಎನಿತೆನಿತು ಕಷ್ಟ ಕಾರ್ಪಣ್ಯಗಳಂ ಭ-
ರಿಸಿದೊಡಂ ಬದುಕು ಭಾರ; ತೇಜಿಯ ಪೋಷಣೆಯುಂ
ಭಾರಾತಿಭಾರ; ಹಾ, ಎನುತ ತನ್ನೊಳ್ ಸುಯ್ದು
ರಾಮಧನಿ ತ್ರಿಲೋಕಮೆಳ್ಚರುವ ಮುನ್ನಮೆಯೆ
ಹಾಸಿಗೆಯ ಬಿಟ್ಟೆಳ್ದು ಅಶ್ವಶಾಲೆಗೈಯಲ್
ಕಣ್ಣುಗಳ್ ತುಂಬಿ ಕೋಡಿವರಿದುವು 'ಹಾ, ಮೀರ
ರಣರಂಗದೊಳೆನ್ನೊಡಗೂಡಿ ಸೆಣಸಿ ಮೈಯ್ಯ ಬಿಸಿ

ನೆತ್ತರಂ ಚೆಲ್ಲಾಡಿ ಗಾಸಿವಟ್ಟೆ ಈಗಳ್
ಇಂತಪ್ಪ ಬಡತನದ ಬೇಗೆಯೊಳ್ ಸೆರೆಸಿಲ್ಕಿ
ನರಳಿ ಸಾಯ್ವ ಸಂಕಷ್ಟಮೊದವಿತೆ? ನಿನ್ನನಾಂ
ನನ್ನ ನೀಂ ಆಶ್ರಯಿಸಲಾರದ ದುರ್ಗತಿಯೊದವಿ
ಬದುಕು ಹೊರೆಯಾಯ್ತೆ? ಇನ್ನೇಂಗೈವೆಂ
ಎಂತು ಸೈಪೆಂ ಮೀರ!' ಎಂದಳುತ ಊರಿನಾ
ಪೊರ ಬಯಲಲಿ ಇಬ್ಬನಿವುಲ್ಲುಣಿಸುವಂ ತಾನೆ.

ಈ ಪರಿಯಲೆನಿತೋ ದಿನಮಾಸಂ ಕಳೆದುದ್ದೈ
ಕಣ್ಣೀರಿನ ಕಡಲ್ ತುಂಬಿ ಕೋಡಿವರಿವನ್ನಂ!
ರಾಮಧನಿ ತೇಜಿಯ ತಲೆಯಮೇಲೆ ತಲೆಯಿಟ್ಟು
ತಬ್ಬಿ ಮುದ್ದಿಸಿ ತನ್ನೊಡಲ ಸಂಕಟವನ್ನೊರೆಯುತಿರೆ
ಮಡದಿ ಅವಸರದಿಂ ಬಳಿಗೈತಂದು ಪೇಳಿದಳ್
ಹರಧನಿ ಉದರ ಶೂಲೆಯಿಂದ ನರಳುತಿರ್ಪನ್ನೈ
ಪಂಡಿತರ ಕರೆಯದೆ ಗತಿಯಿಲ್ಲಂ ಎಂದರುಹಿ
ತಾಳಲಾಗದ ಸಂಕಟದಿಂದೋಡಿದಳ್ ಕುಟಿಗೆ.

ಆಗಳಾ ತೇಜಿ ಧಣಿಯ ಗೋಳಂ ಅರಿತವೊಲ್
ತಲೆದೂಗಿ ಕಿವಿಗಳಂ ಪಟಪಟಿಸಿ ಬಾಲಮಂ
ಬೀಸಿ ವೀಸಿ ಅತ್ತಿತ್ತ ಉಡಿದಾಡಿ ತನ್ನಯ
ಕರುಳಿನ ಕರುಣಕಾತರವನೆಲ್ಲ ಸೂಸಿತ್ತೈ
ಮೂಕ ಮೌನದಲಿ!

ರಾಮಧನಿ ಕುಟಿಗೈದು ನೋಡೆ,
ಬಾಲ ಹರಧನಿ ಉದರ ಶೂಲೆಯಿಂದತಿ ನರಳು
ತಿರ್ದಂ ಕಂಗಳಲಿ ಕಂಬನಿಸೂಸಿ. ರಾಮಧನಿ
ಕಾಸಿಲ್ಲದೆ ಕಿಸೆಯಲಿ ಕಡುಚಿಂತೆಗೊಳಗಾಗಿ
ನಿಡುಗಂಬದೊಲ್ ನಿಂತು ಯೋಚಿಸಿದೊಡಂ ಅನ್ಯ
ಮಾರ್ಗಮಿಲ್ಲದೆ ಊರ ವೈದ್ಯರ ಕಡೆಗೆ ನಡೆದಂ.

''ಹೇ ಈಶ್ವರನೆ! ನೀನೆನ್ನಂ ಪರಿಕಿಸುವೆಯಲ್ತೆ?
ಈ ಭಂಗ ಬವಣೆಯಂ ನೀನಲ್ಲದಿನ್ನಾರು
ನೀಡಲಕ್ಕು? ನೀನೇ ನಿಷ್ಕರುಣೆಯಿರಲಾರ್
ಕಾಪಿಡುವರ್ ಪೇಳ್ಕೆ. ಏಕಿಂತು ನರಳಿಸುವೆ
ಜೀವಹರಣಗೈಯದೆ'' ಎಂದು ಮೊರೆಯಿಡುತ್ತಲೆ
ಹಾದಿ ಕಳೆದಂ. ವೈದ್ಯನಿರ್ದೊಡವನೇಂ ರೊಕ್ಕ
ದಕ್ಕಿದಲ್ಲದೆ ಬಂದಪನೇ? ರಾಮಧನಿ ಬೇಡಿ
ಮನಂಗೆಟ್ಟು ನೊಂದು ನಲುಗಿ ಮಿಣ್ಣನೆ ಪಿಂತಿರುಗೆ
ಹಾದಿಯೊಳ್ ಅನಿರೀಕ್ಷಿತ ಯೋಧಗಣೆಯನೊರ್ವಂ
ಕಂಡು ಬರೆ ಆನಂದಿಸಿದೊಡಂ ದಾರಿದ್ರ್ಯ ಬೇಗೆ
ಒಡಲ್ ಕೋರೈಸುತಿರೆ ತೆಕ್ಕನೆ ಹನಿತುವೆರಡು
ಕಣ್ಣುಗಳು. ಆಗಳಾ ಗೆಣೆಯಂ ಚಣದೊಳೆಲ್ಲ
ವಿದ್ಯಮಾನಮನರಿತು ಕೇಳಿದಂ ''ಮತ್ತೀಗ
ನೀನೆಂತಶ್ವಮಂ ಪರಿಪೋಷಿಸುವೆ? ಇಂತಪ್ಪ
ಸಂಕಷ್ಟದೊಳ್? ನಿನಗಿದು ಅತಿಭಾರಮಲ್ತೇ?''
''ಮಿತ್ರ! ಆ ಗೋಳೆಂತೊರೆವೆಂ....ಎನ್ನ ಮುದ್ದಿನ
ಖನಿ ಪುಲ್ಲು ನೀರೊಳೆ ಬದುಕಲಕ್ಕು. ನಾಮೆಂತೊ
ಅದು ಆಂತೆ;'' ಎನುತೆ ನಿಡುಸುಯ್ದನಾ ರಾಮಧನಿ.
ನುಡಿ ಕೇಳ್ದು ನೇಹಿಗನ ಮನದೊಳ್ ಎಣೆಯಿಲ್ಲದ
ದುರಾಸೆ ಕುಡಿ ಕೊನರ್ದು ವಿನಯದಿಂ ನುಡಿಸಿದಂ,
''ಎಲೆ ಮಿತ್ರ, ನೀನದಕೆ ಪುಷ್ಟಿಗೊಳಿಡದೆಯೇ
ದಣಿಪುದು ಸರಿಯಲ್ಲಂ; ಅದನಿಂದು ವಿಕ್ರಯಿಸಿ
ನಿನ್ನ ಭಂಗ ಬವಣೆಗಳಂ ಕಳೆವುದುತ್ತಮಮಿರೆ
ಚಿಂತೆಯೇಕೆಲೆ? ಅಂತುಮಲ್ಲದೆ ಧನಿಕಧಣಿಯ
ಬಳಿ ಪುಷ್ಟಿಗೊಂಡು ಸೊಗದಿಂ ಬಾಳ್ವುದೆಂಬುದಂ
ಮರೆಯದಿರ್. ನೀನೊಪ್ಪಿದೊಡೆ ಆನದಂ ಕೊಳ್ವೆ

ನೀಂ ಮನದೊಳ್ ಬೇರೇನಂ ಬಗೆಯದೆ ಯೋಚಿಸಿ
ನಿರ್ಧರಿಸೆಲೆ'' ಎಂದ ನೇಹಿಗನ ಮಾಳ್ಕೆಯಲಿ.
ಕಿಂಚಿತ್ ಒಡಕಿಲ್ಲದ ದನಿಯೊಳೆನಲವಂ ಮಿಗೆ
ಮನಂ ನೊಂದು ಕರಗಿ ಕರುಣೆಯ ಕಟ್ಟೆ ಬಿರಿದುದು
ಕೋಡಿವರಿವನಕಂ. ರಾಮಧನಿ ಮತ್ತೆ ಏನೊಂದು
ನುಡಿಯಲಾರದೆ ತನ್ನೊಳ್ ತಹತಹಿಸುತಿರಲ್ಕೆ
ಮಿತ್ರಂ ಮರುನುಡಿದಂ ''ಇದೇಂ ಪೆಂಗಳೆಯರೊಲ್
ಕೊರಗುತಿಹೆ? ನೀಂ ಯೋಧನಲ್ತೆ? ಕಜ್ಜಮಿಲ್ಲದೆ
ತೇಜಿಯಂ ಪಾಲಿಸಲಕ್ಕುಮೆ ಈ ಕಾಲದೊಳ್?
ಬಿಡು ನೈರಾಸ್ಯಮಂ. ಬರ್ದುಕಿಗೆ ನಿಜ ಬಟ್ಟೆ
ಏವುದೊ ಅದರೊಳ್ ನಿಶ್ಶಂಕೆಯಿಂ ನಡೆವೊಂದು
ಕೆಚ್ಚಿಲ್ಲದಿರ್ದೊಡೆಂತು? ನೀನೆನ್ನನರಿತುಂ
ನಂಬದಿರ್ದೊಡಿದಕೇನೆನಲಕ್ಕು ಪೇಳಯ್ಯ?''
ರಾಮಧನಿ ಬಲು ಸಂಕಟದಿಂದದಕೊಪ್ಪಿಗೆಯ
ನೀಡಿ ದೇವರಾಣೆಯಿಟ್ಟು ''ನೀನೆನ್ನಂತೆಯೆ
ಇದಂ ಬಲ್ಮೆಯಿಂ ಪಾಲಿಕು'' ಮೆಂದು ನುಡಿಯಲ್ಕೆ
ಆ ಮಿತ್ರನಾಗಲೇ ನೂರುವರಹಗಳವನ
ಕೈಗಿತ್ತು ''ಕೇಳ್, ಇನ್ನು ಮೂಕಂತುಗಳಲ್ಲಿ
ನಿನ್ನ ಪೂರ್ತಿ ಹಣಮಂ ತಂದೀವೆ, ಬಿಡು ಚಿಂತೆ.''
ಎಂದೆನುತೆ ಅವನೊಡಂ ಲಾಯಕೆತ್ತು ತೇಜಿಯಂ
ಕಣ್ತುಂಬ ನೋಡಿ ಅತ್ಯಾನಂದದಿಂ ಮತ್ತೆ
ನುಡಿದಂ ''ರಾಮಧನಿ! ನೀನೆ ಇದನೆನ್ನ ಬೀಡಿಗೆ
ಕರೆತಂದು ಬಿಡ್ಶೈ. ಅಲ್ಲದೊಡಿದುಂ ಮನನೊಂದು
ಕುಗ್ಗಿ ಮೈಗೆಡುವ ಪ್ರಸಂಗ ಬರ್ಕುಂ.''
ಆಗ
ರಾಮಧನಿ ಕಡುಸಂಕಟದಿಂದದರ ಕೊರಳಿನ

ಮಿಣಿಯಂಗಳಚಿ ''ಎನ್ನ ಪ್ರಾಣ ಪದಕವೆ, ನಿನ್ನ
ನನ್ನ ಋಣಮಿಂದಿಗೆ ಮುಗಿಯಿತು. ದೇವರು ನಿನ್ನ
ಕಾಪಿಡುವ; ಚಿಂತಿಸದಿರ್'' ಎನುತದರ ತಲೆಯೊಳ್
ಮೊಗವಿಟ್ಟು ಕಣ್ಣೀರ್ ಬಸಿದು ಗೋಳನೊರೆದು, ಸತಿ
ಸುತರಿಂಗೆ ತಿಳಿಪಿ ಮಿತ್ರನೊಡನದ ನಡೆಸಿದಂ.
ತೇಜಿ ತನ್ನಾಪ್ತ ಧಣಿ ಇಂದೆನ್ನ ಕೈವಿಟ್ಟ
ನೆಂಬುದಂ ಮನದೊಳ್ ಬಗೆದು ಕೊಸರಿ ಜಗಿದಾಡಿ
ಪಿಂತಿರುಗಲ್ ಸೆಣಸುತಿರೆ ರಾಮಧನಿ ಹಾದಿಯು
ಕಳೆವನಕ ಅಳುತಳುತ ಪಿಡಿದೊಯ್ದು ಮಿತ್ರನ
ಬೀಡಿನೊಳ್ ಕಟ್ಟಿ ತನಿಹುರುಳಿ ಕಡಲೆ ಮುಂತಪ್ಪ
ನಲ್ ತಿನಿಸನಿತ್ತು ಪರಿಚರಿಸಿದೊಡಂ ಅದನದುಂ
ಮುಟ್ಟದೆ ಮೂಸದೆ ಕೆನೆದು ನೆಗೆದಾಡಿ ಪಿಂತಿರುಗಿ
ತನ್ನ ಧಣಿಯಂ ನೋಡುತ ಕಂಬನಿ ಸೂಸಿದುದು
ಮನಂಗೆಟ್ಟು.

ಮತ್ತಾಗಳ್ ಮಿತ್ರ ಮುಂಗೆತ್ತು
ರಾಮಧನಿಯಂ ಸಂತೈಸಿ ಬೋಳೈಸಿ ನುಡಿದಂ,
''ಕೇಳ್, ಇನ್ನೊಂದು ಮಾಸದೊಳಿತ್ತ ಬಂದಪೆಂ.
ಆಗಳೆಲ್ಲ ಸುಖದುಕ್ಕವ ನಿನಗೊರೆದು ಮಿಕ್ಕಿನ
ತಕ್ಕಿನ ರೊಕ್ಕಮನೆಲ್ಲ ನಿನಗೀವೆ.''

ರಾಮಧನಿ
ಮುಂಗಾಣದೆ ತೇಜಿಯ ಮುದ್ದಿಟ್ಟು ಕಣ್ಣೀರ್
ಸುರಿಸುತಲಿ ಒಲ್ಮೆಯಿಂ ಸಲಹಲ್ ಮನವಿಮಾಡಿ
ತಾಂ ಪಿಂತಿರುಗುತಿರೆ ಒಡಲ ಕರುಣೆಯಿಂ ಕರುಳ್
ಕರಗಿ ನೀರಾಗಿ ಶತಧಾರೆಯಪ್ಪಿ ಪರಿದತ್ತು,
ವರ್ಷಋತುವಿನ ಕೆರೆಯ ಕೋಡಿಯಂ ತಾಂ ಹೋಲಿ!

ಮರುದಿನ ರಾಮಧನಿ ಮತ್ತೆ ನಡೆದವನವನಾ

ಬೀಡಿಂಗೆ ಒಡಲ ಸಂಕಟಂ ತಾಳಲಾರದೆ
ಆಗಳಾ ತೇಜಿ ತನ್ನೊಡೆಯನಂ ಕಣ್ಣಿಂದ
ಕಂಡು ಸಂತಸಂಬಟ್ಟು ಅಕ್ಕರೆಯಿಂದೆದ್ದು
ಕೊಸರಾಡಿ ಹೂಂಕರಿಸಿ ಕೆನೆದು ಬಾಲಮಂ ಬೀಸಿ
ಅತ್ತಣಿಂದಿತ್ತಣಿಂ ಇತ್ತಣಿಂದತ್ತಣಂ
ಜಿಗಿದಾಡಿ ಕಣ್ಮರಳಿಸಿ ನೋಡುತಿರಲಿತ್ತಲ್
ರಾಮಧನಿ ಓಡಿ ತಬ್ಬಿ ಮುದ್ದುಗೈದು ಮೆಯ್ಯಂ
ನಿಳುಪಿ ಉಜ್ಜಿ ತನ್ನೊಡಲ ಸಂಕಟವ ಬಸಿದಂ
ಅದರ ಶಿರದೊಳ್. ಅಂತೆನಿತು ಸಮಯಮುರುಳ್ದುದೊ,
ಆ ಗೋಳಿನುಬ್ಬರಮಿಳಿದ ಬಳಿಕ ರಾಮಧನಿ
ಅದಂ ಮುದ್ದಿಟ್ಟು ಬಲ್ಮೆಯಿಂ ನಲ್ ಪುರುಳಿ ಪುಲ್
ನೀರುಣಿಸಿ ಪಿಂತಿರುಗಿದಂ. ಮತ್ತೆ ಮೂದಿನಂ
ನಡೆದುದಿಂತಪ್ಪ ಮುದ್ದಿನಿಂದದರ ಮನಕ್ಕೆ
ಸೈಪೆಸಗುವ ಕಜ್ಜಂ. ನೋಳ್ಪವರ ಮನಮರುಗಿ
ಕಂಬನಿಯು ತೆಕ್ಕನೊಸರ್ವಂತೆ.
ತರುವಾಯಿ
ಕಳೆದುವೇಸೋದಿನಗಳ್. ಹರಧನಿ ಮೆಲ್ಲಮೆಲ್ಲನೆ
ಚೇತರಿಸೆ, ಕಿರಿದೊಂದು ವ್ಯಾಪಾರ ಜೀವನಂ
ಬೆಳಸಿ ಸಂಸಾರಕೆ ಹೆಗಲು ಕೊಟ್ಟು ತಾಂ ದುಕ್ಕ
ಭಾರವಿನಿತಿಳಿಸಿದೊಡಂ; ರಾಮಧನಿ ಮಿತ್ರನಂ
ಕಣ್ಣಿಂ ಕಾಣದೆ ಎಲ್ಲಿರುವನೆಂಬುದನರಿಯದೆ
''ಎನ್ನ ತೇಜಿಯ ಗತಿಯೇನಾಯ್ತೊ ಎಂತಿರ್ಪಳೋ
ಇನ್ನೆಂದು ಕಾಂಬೆನೊ'' ಎನುತ ತನ್ನೊಳ್ ತಪಿಸಿ
ಮರುಗಿ ಕಾತರಿಸಿ ನೆನೆಯುತಿರ್ದಂ; ಹಗಲಿರುಳ್
ಏಗಳುಂ ಹಾದಿಯೊಳ್ ಕಣ್ಣಿಟ್ಟು ನೋನೋಡಿ
ಸೋತು ಬೇಸತ್ತು ಕಂಗಾಲಾಗಿ ತನ್ನನುಂ

ತಾನೆ ಬಾರಿ ಬಾರಿಗು ಪಳಿವಂ.

ಇಂತಿರೆಯಿರೆ

ಐದಾರು ಮಾಸಂಗಳ್ ಉರುಳ್ದಬಳಿಕ್ಕಂ
ರಾಮಧನಿಯೊರ್ವನೆ ಪೊರನಡೆಯೆ ನಗರಗಡಿಯ
ತೋಂಟದಂಚಲಿ ಕೇಳ್ದುದೊಂದು ಶೀರ್ಣ ಧೀರ್ಣಿತ
ಕಂಠದಿಂ ಪೊದಳ್ದ ಪ್ರಾಣಾಂತಕ ದನಿ! ಸಮಸ್ತ
ಜೀವರಾಶಿಯ ಬೇನೆಯಣಂ ಒರ್ಮೆಗೆ ಸೋರ್ದ
ವೊಲ್ ಸಂಪ್ಲವಿಸಿತ್ತಾ ರೋಧನಂ!!

''ಹಾ, ಇದಂ

ನರಮನುಜರಳಲಲ್ತು. ಆವ ಪೇರ್ ಪ್ರಾಣಿಯೊ
ಮತ್ತಾವುದೊ ರುದ್ಧ ಕಂಠದಿಂದೊರಲಿರಲಕ್ಕು''
ಎಂದು ಮನದೊಳ್ ಬಗೆದು ದನಿಯ ಜಾಡರಸುತಿರೆ
ಮತ್ತೆ ಪೊದಳ್ದುದಾರೋದನಂ, ಕಿವಿ ಗಹ್ವರಂ
ಕೋರೈಸುವಂತೆ! ಆಗಳವಂ ಮೂಕ ವಿಸ್ಮಯ
ದಿಂದೆ ಕಣ್ಣಿಟ್ಟು ದನಿಯ ಜಾಡಿನೊಳೆ ನಡೆದಂ.
ಅನತಿದೂರದಲಿ ಮೈಸೊರ್ಕಿ ಬೆಳೆದ ಶಾಡ್ವಲ
ತಡಿಯಿಂದ ಮತ್ತೆ ಕೇಳ್ದುದಾ ದನಿ ಮಾನವತಾ
ಕಟುತ್ವಂ ಪ್ರತ್ಯಕ್ಷಮಪ್ಪಂತೆ! ಕಣ್ ಬೆರ್ಚಿ
ಮನಂ ಬೆರ್ಚಿ ಮೊಗಂ ಬೆಳ್ಪುತಳೆದೊಡಂ ಕಳವಳ
ಗೊಳ್ಳದೆ ಎರ್ದೆಯಂ ಬಿಗಿವಿಡಿದು ಪಜ್ಜೆಪಜ್ಜೆಗೆ
ಮುಂಬರಿದು ಸೇರಲಾ ತಾಣಂ ಪೇಳುವುದೇಂ?
ಬಂಡೆಗಲ್ಲುಗಳ ನಡುವೆ ಶಾಡ್ವಲದ ತಡಿಯಲಿ
ಬಿದ್ದು ಪೊರಳಾಡುತಿರ್ದ ತನ್ನ ಪಂಚ ಪ್ರಾಣದ
ಖನಿಯಾದ ತೇಜಿಯಂ ಕಣ್ಣಿಂದ ಕಂಡನಾ
ರಾಮಧನಿ ''ಅಯ್ಯೊ, ದೇವರೆ! ಎನ್ನ ಕಣ್ಮಣಿಗೀ
ದುರ್ಗತಿಯನಿತ್ತೆಯಾ? ಎಂತಿದಂ ಕಣ್ಣಿಂದ

ನೋಡಿ ಸೈಸಲಿ ತಂದೆಯೇ'' ಎಂದು ಕಡುನೊಂದು
ಸಂಕಟದಿಂ ಕಂಬನಿಗರೆಯುತ ಪಿಡಿದೆತ್ತುವೆನೆನೆ
ಪ್ರಯತ್ನಿಸಿದೊಡೆ ಆವುದೇಂ ಓರ್ವನಿಂದದ
ನೆತ್ತಲ್? ಬರಿದೆ ತಲೆಯಂ ಪಿಡಿದೆತ್ತಿ ಮೈಯಕಡೆ
ದಿಟ್ಟಿಯಂ ಪರಿಸೆ ಎಲುಬಿನ ಗೂಡಿನಲೆಲ್ಲೆಡೆ
ವ್ರಣಗಳಿಂದ ತುಂಬಿದ್ದು ಪುಳು ಬಿದ್ದುನಾರುತ
ನೊಗವೊತ್ತ ಕೊರಳ್ ಮರವಟ್ಟು ಶಕ್ತಿಯು ಸೋರ್ದು
ಪ್ರಾಣಸಂಕಟ ಪಡುತಿರ್ದೊಡಂ ಪ್ರಾಣಧಣಿಯ
ಕಂಠಸ್ವನಂ ಕೇಳ್ದು ಕಿವಿಯಂ ನಿಮಿರ್ಚಿ ಬಿರಿ
ಬಿರಿ ಕಣ್ಣಿಟ್ಟು ನೋಡುತ ಮತ್ತೆ ಒರಲ್ದುದು ಕರುಳ್
ಇರಿದು ಕತ್ತರಿಪಂತೆ. ಆ ಧೂರ್ತ ಇಂತೊಂದು
ಭಂಗ ಬವಣೆ ಈಯಲೆಂದು ಎನ್ನಿಂದಲಿದಂ
ಪಡೆಕೊಂಡನೆ? ಹಾ, ಎನ್ನೊಂದು ಆಸೆಯಿಂದಲೆ
ಇತ್ತಲೈತಂದು ಕಾಲ್ಜಾರಿ ಹೊಂಡಕೆ ಬಿಳ್ದು
ಏಳಲಾರದೆ ಕೂಗುತ ಒದ್ದಾಡುತಿರ್ಪುದು
ಎಂದರಿತ ರಾಮಧನಿ ಎಂತಾದೊಡೆತ್ತಿದೊಡೆ
ತಾಂ ಕುಟಿಗುಯ್ಯಬಹುದೆಂಬೊಂದು ಆಸೆಯೊಳ್
ಎನಿತೆನಿತು ಪ್ರಯತ್ನಿಸಿದೊಡಂ ಕೈಸಾಗದಿರೆ
ಬೊಗಸೆಯೊಳ್ ನೀರಂ ಮೊಗೆದು ಬಾಯಿಗೆ ಸುರಿಯಲ್
ಅದು ಗಟಗಟನೆ ಕುಡಿದು ಮತ್ತೆ ನೋಡಿದುದವನಂ
ನೀರಡಿಕೆ ನೀಗದೊಲ್, ಆಗಳಾ ರಾಮಧನಿ
ಉತ್ತರೀಯವಂ ನೀರಿನೊಳದ್ದಿ ತಂದದರ
ಬಾಯ್ಗೆ ಮತ್ತೆ ಪಿಂಡಲ್ ಕುಡಿದು ತನ್ನ ನಿಜಧಣಿ
ರಾಮಧನಿಯಂ ನೋನೋಡಿ ಮತ್ತೊಮ್ಮೆ ಒರಲ್ದು
ಒದ್ದಾಡಿ ಏಳುವೆನೆನೆ ಆಗದಿರಲ್ ಮತ್ತೆ
ಮೇಣ್ಮತ್ತೆ ಹೊರಳಾಡಿ ಒದ್ದಾಡಿ ಒರಲ್ದೊರಲ್ದು

ಕಣ್ಮರಳಿಸಿ ನೋಡಿ ಅಶ್ರುಧಾರೆಯಂ ಸೂಸುತ
ಪ್ರಾಣವಂ ಬಿಟ್ಟಿತ್ತೈ ನಿಜಧಣಿಯ ಕೈತೆಕ್ಕೆಯಲಿ.
ಇಂತೀ ಕರುಣಕತೆಯ ನಿರೂಪಣೆ ಮುಗಿವನ್ನ
ದೇವಿ ಕವಿಯಿತ್ರಿಯ ಕರುಣೆಯ ಕಟ್ಟೆ ಬಿರಿದುದು
ಸಾಲ್ವರಿದ ಅಶ್ರುಕೋಡಿಯಂ ಸಾಕ್ಷೀಕರಿಸಿ!

— o —

# ಸರೋಜಿನಿ ನಾಯ್ಡು

(ಆಧಾರಿತ)

ಆಂಗ್ಲ ಮಹನೀಯರಾಳ್ವಿಕೆಯ ವಿಷಚಕ್ರದಲಿ
ಸಿಲ್ಕಿ ನರಳುತಿರೆ ಭಾರತವರ್ಷ ಅಜ್ಞಾನ-
ಅವಿದ್ಯೆ-ಅಚಾತುರ್ಯ-ಮತಿಮೌಢ್ಯ ಮುಂತಪ್ಪ
ಸಂಕಷ್ಟಗಳಿಂದಲಿ ಕನ್ಯಾಕುಮಾರಿಯಿಂ
ಹಿಮಾಲಯದವರೆಗಿನ ಅಮೂಲ್ಯ ಮಾನವಜನ್ಮ
ಕ್ರಿಮಿಕೀಟಗಳವೊಲ್ ವ್ಯರ್ಥಜೀವನದಿಂದೆ
ಕಾಲನದಿಯೊಳ್ ಕೊಚ್ಚಿ ಹೋಹುದ ನೋನೋಡಿ
ಮನನೊಂದ ಕಾರುಣ್ಯ ದ್ರವ್ಯ ದ್ರವಿಸಿ ಹೋಹೆ
ಭಾರತದ ಭವ್ಯಭವಿಷ್ಯದ ನೆನೆದ ಧೀಮಂತ
ಸ್ವಾಮಿ ವಿವೇಕಾನಂದರ್ ದೃಢ ಕಂಠದಿಂ
ನುಡಿದರೊರ್ಮೆ ''ಭಾರತ ಜನನಿಯ ಭವಿಷ್ಯಮಂ
ಉಜ್ವಲಿಸೆ ಬೇಕಾದುದು ಇಂದು ಪುರುಷನಲ್ಲ;
ಸ್ತ್ರೀ! ನಮ್ಮ ಸ್ತ್ರೀಯರು ಧೀಮಂತರಾಗದೆಯೆ
ಎಂದುಮೆಂದಿಗೂ ಭಾರತವರ್ಷ ಈಯೊಂದು
ಪರಿಪಾಡಿನ ನರಕಂ ದಾಂಟುವುದು ಅಸಾಧ್ಯಂ!''
ಎಂತಪ್ಪ ಕಠೋರ ಸತ್ಯಮಂ ದೇಶಿಗರ
ಮುಂದೆ ತೆರೆದ ಗ್ರಂಥದೊಲ್ ಇಟ್ಟರಾ ಗುರುವರ್ಯ!
ಇಂತೀ ನುಡಿಯಂ ಭಾರತಜನನಿ ಆವ ಶುಭ
ಗಳಿಗೆಯಲಿ ಮನಂಗೆತ್ತಳೊ ಅನೇಕಾನೇಕ
ಧೀಮಂತ ಮಹಿಳಾ ಮಣಿಯರ್ಗೆ ಜನ್ಮವಿತ್ತಳ್!
ಆ ದಿವ್ಯಧಾರೆಯಲ್ಲಿ ಸರೋಜಿನಿದೇವಿ
ತಾನೋರ್ವಳೆನೆ ಸಲ್ಪವೊಲ್ ಮೆರೆದು ವಿಜೃಂಭಿಸಿ

ಸ್ತ್ರೀ ಕುಲಕೆ ಮೇಲ್ಪಂಕ್ತಿಯಾದಳೈ ಏರುತ್ತೇರಿ!
ಶತಶತಶತಮಾನಗಳಿಂದೆ ಭಾರತ ಜನನಿ
ಶೃಂಖಲಾಬದ್ಧ ದಾಸ್ಯ ಜೀವನದಲಿ ನರಳಿ
ನರಳಿ ಎಲುಬಿನ ಹಂದರಂಮೈಸಿ, ನೋಳ್ಪ ಕಣ್
ಕರಂಗಿ ಹರಿವವೊಲ್ ಕರುಣಾಜನಕದಲಿರಲ್;
ಆ ಅಸಹನೀಯ ದಾರಿದ್ರ್ಯ ಸಂಕಟ ಚಿತ್ರದ
ಪರಿಣೇತೃ ಬ್ರಿಟಿಷರ ಧೂರ್ತ ದುಮ್ಮಾನದಾ
ದರ್ಬಾರಿನೈಸಿರಿಯ ಮಹಾ ಇಂದ್ರಭೋಗವೇಂ?
ದರ್ಪ ಕ್ರೌರ್ಯ-ರೊಚ್ಚು-ತಿರಸ್ಕಾರಗಳಬ್ಬರವೇಂ?
ಭಾರತ ಜನನಿಯ ಸರ್ವಸಾರಮಂ ಪೀರ್ದುಂಡು
ತನುಮನಂ ಬಿರಿವನ್ನ ಮೈದುಂಬಿಸುತ ಮೆರೆದು
ತಮ್ಮೊಂದು ಪನ್ನತಿಕೆಯ ಸಿರಿವಂತ ವೇಶದಿ
ಭಾರತೀಯರಂ ತಿರಸ್ಕಾರದಿಂ ಕಾಣುತಲಿ
ತಾವ್ ಸ್ವರ್ಗಾಧಿಪತಿಗಳೊಲ್ ಮೆರೆಯುತಿರ್ದರ್
ದೇಶಿಗರ ಹೊಟ್ಟೆಯುರಿದು ಮಣ್ಣಾಗುವವೊಲ್!
ಅಂತಪ್ಪ ಅಸಹನೀಯ ದಾರಣಗಾಲದೊಳ್
ಸರೋಜಿನಿದೇವಿ ಜನ್ಮತಳೆದು ಬೆಳಗಿದಳಾ
ಭಾರತ ಜನನಿಯ ಓಜೆಯಂ ಓಜಿಸುವೊಲ್!
ರಾಷ್ಟ್ರದಾದ್ಯಂತ ಜನಮನಂ ತಾಳಲಾಗದ
ದುಃಖ-ಸಂಕಟ-ರೋಗರುಜಿನ-ನಿರುದ್ಯೋಗ-ಅತಿ
ಬಡತನ-ಮತಿಮೌಢ್ಯ-ಅಜ್ಞಾನ-ಅವಿದ್ಯೆ ಇತಿ
ಘೋರಾತಿಘೋರ ಸಂಕಷ್ಟ ರಸಮಂಮುಂಡು
ಗುಲಾಮೀ ಪದ್ಧತಿಯ ದೀನಾದೀನತೆಯಿಂದೆ
ಮೈ ಬಗ್ಗಿ ತಗ್ಗಿ ನಡೆದಿರ್ದೊಡಂ ಸುಖವಿಲ್ಲ!
ಶಾಂತಿಯಿಲ್ಲ! ಇಂತೊಂದು ದೈನ್ಯತೆಯಿಂದಲ್ತೆ
ರಾಷ್ಟ್ರದ ದಿವ್ಯ ಪಿನ್ನಡೆ? ಜಡ ಜೀವನ ಸತ್ಯ?

ಅಘೋರನಾಥ ಚಟ್ಟೋಪಾಧ್ಯಾಯ ಮೂಲತಃ
ಬಂಗಾಲಿಯಾದೊಡಂ ನೆಲೆನಿಂದುದು ಹೈದರಾ-
ಬಾದ್ ನಗರಿ. ಜನನಿ ವರಸುಂದರೀದೇವಿ,
ಅಘೋರನಾಥಂ ಸಾಹಿತ್ಯ-ವಿಜ್ಞಾನ-ರಸಾಯನ
ಶಾಸ್ತ್ರ ಮುಂತಪ್ಪ ಮಹಾ ವಿದ್ಯಾ ಪಾಂಡಿತ್ಯದಿಂ
ಸುಶೋಭಿತ ಘನವಂತ ವ್ಯಕ್ತಿಯಿರೆ, ಜನನಿಯುಂ
ಬಂಗಾಲಿ ಭಾಷೆಯಲಿ ಕವನಗಳಂ ಕವನಿಸಿದ
ವಿದ್ಯಾವನಿ! ಮೇಣಾ ದಂಪತಿಗಳ್ ಆಧ್ಯಾತ್ಮಿಕ
ರಂಗದಲಿ ಬಹುದೂರ ಮುಂದುವರಿದ ಅನುಪಮ
ಜೋಡಿ! ನಿಚ್ಚಂ ಒಳ್ನುಡಿ, ಒಳ್ನಡೆಗಳಿಂದಂ
ಸುಪ್ರಸಿದ್ಧಂ! ಮಾನವ ಜೀವನ ವಿಕಾಸಂ
ಗುರಿಗೊಂಡು ಪರ್ವಕಾಲದ ಕಳ್ತಲೆಯ ದಟ್ಟ
ತೆರೆಯಂ ಪರಿದು ದಿಟ್ಟತನಂ ತಾನಾರ್ದು ಆ
ಪರಿಸರದ ದೀನದಲಿತರಂ ಕಡು ಕಳ್ತಲೆಯಿಂ
ಬೆಳಕಿನೆಡೆಗೆ ನಡೆಯಿಸುವ ದಾರಿ ದೀಪದೊಲ್
ಹೂನ್ಯಂ! ಅಘೋರ ನಾಥ ಚಟ್ಟೋಪಾಧ್ಯಾಯಂ!
ಅಂತಪ್ಪ ಮಾತಾ ಪಿತೃಗಳ ಗರ್ಭಾಂಬುಧಿಯಲಿ
ಸಾವಿರದೆಂಟನೂರೆಪ್ಪತ್ತೊಂಭತ್ತನೆ ಫೆಬ್ರವರಿ
ಹದಿಮೂರನೇ ತೇದಿ ಸಂಜನಿಸಿತು ಶಿಶುರತ್ನ
ಸರೋಜಿನಿ ದೇವಿ ಭಾರತ ಕಲ್ಯಾಣಿ ತಾನಾಗಿ!
ಭಾರತರವಿ ಉಜ್ವಲ ವೈಖರಿಯಲಿ ಮೆರೆದಂ
ಧೀರ ಧೀಮತಿಯಂ ಮನಮುಟ್ಟಿ ಹರಸುವವೊಲ್!
ದಿನಗಳೆಯೆ, ಪುಣ್ಯವತಿ ಮಾತೆ ಪುತ್ರಿಯ ಆಸೆ-
ಆಕಾಂಕ್ಷೆ-ತೀಕ್ಷ್ಣಮತಿಗಳಂ ಲಕ್ಷ್ಯದೊಳಿಟ್ಟು
ಸೂಕ್ತರೀತಿಯೊಳ್ ತಿದ್ದಿ ತಿಳಿಪುವಳ್ ಎಳೆಮನ
ವಿಕಾಸಗೊಳುವ ಮಾಳ್ಕೆಯಲಿ. ಬಾಲೆ ಸರೋಜಿನಿ

ಶುಭ್ರ ಸ್ವಚ್ಛತೆ, ಮೇಣ್ ಸೌಂದರ್ಯೋಪಾಸನೆಯ
ಪೆಂಪು, ತಂಗದಿರ ಬೆಂಗದಿರ ಉದಯಾಸ್ತಗಳ
ಮೋಹನೀಯ ಸೊಂಪು, ಬಡಗಣದೆಲರಿನ ತಂಪು,
ಮುಂಗಾರ್ ಮಳೆಯಲಿ ಚಿಗುರೊಡೆದ ವನದೈಸಿರಿ
ಕಣ್ತುಂಬಿ ಮನದುಂಬಿ ಮೈದುಂಬಿ ಕೊಂಬುವಳ್!
ಬಾಲ್ಯದೊಳೆ ಹೃದಯ ರಸಜ್ಞತೆ ಮಿರಲ್ ಮನಮತಿ
ಧೀಶಕ್ತಿಯಾಗರ ಸಹಜಂ. ಸಂಭಾವ್ಯಮತಿ
ಮಸಗಿ ಅರಳ್ದುದು ಮಂದಾರ ಹೂ ಬಿರಿವವೊಲ್!
ಎಲ್ಲೋ ಪರಿತ್ಯಕ್ತ ಜ್ಞಾನ ಭಂಡಾರವೈತಂದು
ಚಿತ್ತಕಲ್ಪಮಂ ಆವರಿಸಿದಂತೆ ಅನನ್ಯ
ಜಾನದೀವಿಗೆಯುರಿಯುತಿರೆ ಬಾಲೆ ದುಂಬಿಯೊಲ್
ಚಣಂ ನಿಂತೆಡೆ ನಿಲ್ಲದೆ ಕೂತೆಡೆ ಕೂರದೆ ಅತಿ
ಮಧುರತರ ಚಟುವಟಿಕೆಯ ಬೀಡಾಗಿರೆ ನೋಳ್ಪ
ಕಣ್ ಅಚ್ಚರಿಬಡುವಂತು ಎನಲ್ಕೆ, ಆವಾವ
ದುಷ್ಟಗ್ರಹಗಳ ಪೀಡನೆಯೋ ಅನಾರೋಗ್ಯ
ಆವರಿಸಿದುದು ಎಳೆಮೈಯಂ! ಮಿತಿಮೀರಿದ
ಪುರುಪು ಮುಂದೆಳೆಯುತಿರೆ ರೋಗ ಬಾಧೆ ಹಿಂಸಿಸಿ
ಪಿಂದೆಳೆವುದು ಗೋಳುಗುಡಿಸುವನ್ನ! ಭರ್ತೃಣಿ
ಜಾನದಿಂ ಮಗಳಂ ಮನೆಯೊಳ್ ಲಾಲಿಸುವಂತು
ಪಾಲಿಸುತೆ ಎಳೆಮನ ನಲುಗದವೊಲ್ ಏಗಳುಂ
ನಿಸರ್ಗ ಸೌಂದರ್ಯ ಮನನ, ಮಹದ್ ವ್ಯಕ್ತಿಗಳ
ಗ್ರಂಥ ಪಠಣ, ಕಾವ್ಯಕವನಗಳಲಿ ಅಭಿರುಚಿ
ವಾಚನ ಲೇಖನ ಮುಂತಪ್ಪ ಮಹತ್ಕಾರ್ಯ
ಕುದುರಿಸಲ್ ಬಾಲೆ ಸಂತೃಪ್ತೆ ಸಮಯನಿಷ್ಟೆಯಿಂ!
ಯಾವತ್ಕಾಲಂ ಅಘೋರ ನಾಥನ ಸುತ್ತಲುಂ
ಮೌಲ್ವಿಗಳ್ ಪಂಡಿತರ್ ಇಂಗ್ಲೀಷ್ ವಿದ್ವಾಂಸರ್

ವಕೀಲರ್ ವಿಜ್ಞಾನಿಗಳ್ ಮೊದಲಪ್ಪ ಜನರ್
ಜಾತಿಮತ ಭೇದಮಿಲ್ಲದೆ ನೆರೆದು ವೈಚಾರಿಕ
ವಿಮರ್ಶೆ ನಡೆಸೆ, ಸರೋಜಿನಿ ಮನ ಮಥಿಸಿಮಥಿಸಿ
ತಾನವಿತಾನಂ ಅಕಾಂಡತಾಂಡವ ನೃತ್ಯಗೈಯೆ
ಮನೋರಂಗಂ ಛಿದ್ರವಿಚ್ಛಿದ್ರವಾಗುವವೊಲ್
ಅರಳ್ದುದು ಚಿತ್ತಪುಷ್ಪದಳದಳ! ಸರೋಜಿನಿ
ಪುಷ್ಪಕೋಟಿಯ ವರ್ಣರಂಜಿತ ಸೌಗಂಧಮೆಂತೊ
ವಿದ್ಯಾ ಸರಸತಿಯ ವರ ಆರಾಧನೆಯೆಂತೊ
ಶುಕ ಪಿಕ ಕಲವಿಂಕ ಪಿಕಳಾರ ಬುಲ್‌ಬುಲ್ ಪಕ್ಷಿ
ಸಮಾಜದ ರಾಗಾನುರಾಗದಲಂಪು ಅಂತೆಯೆ
ಮನಃಕುಟ್ಮಲಮಂ ಅರಳ್ಚಿ ಸಾನುರಾಗಂ
ಸೋರ್ದುದು ಹರ್ಷಾಶ್ರು ಬಿಂದುವರ್ಷವಸೂಸುವೊಲ್.
ಮತ್ತಮಾ ಭೃಂಗ ಮಧುಪನಿವಹನ ಝೇಂಕರಿಪ
ಶ್ರುತಿಗಾನ ಮೊರೆದಿರೆ ತಂಬೂರಿ ಮೀಂಟಿದೊಲ್
ಸರೋಜಿನಿ ನೋನೋಡಿ ಮನದುಂಬಿ ಸಂತಸದ
ಮುಗುಳ್ವೆಳಗಂ ಬೆಳಗಿ ಪ್ರಕೃತಿಯೈಸಿರಿಯಲಿ
ಪುದುಳಂಬಡೆದು ಮುದಗೊಳುತಿರಲಾ ರೋಗ ಶನಿ
ಮೈವಿಟ್ಟು ಪಿಂಜರಿಯೆ ಜೀವದ್ರವ್ಯ ಪುಟಿಯುವ
ಚೆಂಡಿನೊಲ್ ದಿನಚರಿಯಲಿ ಕಳೆವುದು ಸುಗಾಲಂ.
ಎಳೆತನದ ಸಾಮಾನ್ಯತೆ ಹುಟ್ಟಳಿದು ಸರಸತಿಯ
ವಾಙ್ಮನಂ ಜಾಜ್ವಲ್ಯಮಪ್ಪಿ ಕವನ ಮಾಲೆ
ಮಸಿಯೊರತೆಯಲಿ ಹರಿಯುತಿರೆ ಬಿಡಿಬಿಡಿ ಮಣಿಯೊಲ್
ಓದುಗರ್ ಬೆನ್ತಟ್ಟೆ ಬಲ್ಮೆಯಿಂ ಪ್ರಚೋದಿಸೆ
'ಸರೋವರ ಸುಕನ್ಯೆ' ಎಂಬ ಸಾಪಿರದ ನಾನೂರು
ಪಂಕ್ತಿಗಳ ಕಾವ್ಯಲಹರಿ ಸ್ಫುರಿಸಿದಳ್ ಬಾಲೆ
ಹದಿಮೂರರಾ ಮುಗ್ಧದುಗ್ಧವಯೋಮಾನದಲಿ!

ಉಷಾಶ್ರೀಕಾಂತೆ ಚಣಂಚಣಂ ಮುಗುಳ್ವಿಗಂ
ಪೆರ್ಚಿಪವೊಲ್ ಲೇಖನ ಕೃಷಿ ಬೆಳೆಯ ತೊಡಂಗಿ
ಕಾವ್ಯ ಕಾನನದಿ ಬಿರಿಮೊಗ್ಗರಳಿ ಪೂವಾಗಿ
ಪರಿಮಳಿಸಿದುದು ದೇಶಿಗರ್ ಕಣ್ ಅರಳಿಸುವೊಲ್!
ಪರ್ಶಿಯನ್ ಭಾಷೆಯಂ ಅಭ್ಯಸಿಸಿ ತನ್ನೊಂದು
ಇಂಗ್ಲಿಷಿನ ''ಮೆಹರ್ ಮುನೀರ್'' ಎಂಬ ನಾಟಕವ
ಅನುವಾದಿಸೆ ಅಘೋರ ನಾಥಂ ಸಂತುಷ್ಟಿಯಿಂ
ಪ್ರಕಟಿಸಿ ಗೆಳೆಯಬಂಧುಗಳಿಂಗೆ ಬಿತ್ತರಿಸಿ
ಪ್ರೋತ್ಸಾಹ ನೀಡಿದಂ ಮುದ್ದಿನಾ ಕುವರಿಂಗೆ.
ಶಾಲೆಯೊಳ್ ತಾಂ ಕಲಿತುದೊಂದಾದೊಡೆ ಮನೆಯಲಿ
ಆರ್ಜಿಸಿದುದು ಮಹತ್ತರಂ! ಪರಿಪುಣ್ಯವಶಾತ್
ಧೀಮಂತ ತಾಯ್ತಂದೆಯ ಒಡಲಲಿ ಜನಿಸಿರ್ದು
ಮಗಳ ಪುಣ್ಯಯೋಗಂ!
''ಮೆಹರ್ ಮುನೀರ್'' ಎಂಬ
ಕೃತಿ ಜನಪ್ರಿಯಂ ಪಡೆದು ನೈಜಾಮ್ ಬಲು
ಮೆಚ್ಚಿನಿಂ ವಿದ್ಯಾರ್ಥಿ ವೇತನಂ ನೀಡಿ ಪ್ರೌಢ
ವಿದ್ಯಾಭ್ಯಾಸಂ ಪಡೆಯೆ ಕಳುಹಿದಂ ಇಂಗ್ಲೆಂಡಿಗೆ.
ಆ ಶೋಡಷಕಳಾಪೂರ್ಣ ಶೋಡಷಿ ಪ್ರಪ್ರಥಮ
ದೀರ್ಘಯಾನ ಕೈಕೊಂಡು ಪೊರಟಳೇಕಾಂಗಿ!
ಮಹಾ ನೀಲ ಸಾಗರ! ಎಲ್ಲಿಂದೆಲ್ಲಿಯವರೆಗುಂ
ಅಲೆಗಳೋಳಿಯಲಿ ನುಗ್ಗಿ ಮುನ್ನುಗ್ಗಿ ಮೇಲಾಯ್ದು
ಬಹ ಅತ್ಯದ್ಭುತ ಭಯಾನಕ ವಾರಿ ರಾಶಿ ರಾಶಿ!
ರವಿಕಿರಣ ಪ್ರತಿ ಫಲಿತ ನಲ್ಗನ್ನಡಿಯೊಲ್
ತೋರ್ಪ್ಪೊಡಂ ಎರ್ದೆ ನಡುಗಿಸುವನಿತು ಅಬ್ಬರದ
ಉಬ್ಬರಂ! ಯಾವ ಗಳಿಗೆಯಲಿ ನಾಕೆಯಂ ಸೆಳೆ
ಕೊಂಬುದೊ ಎನಲ್ಕೆ ಘೋರಾತಿಘೋರ ಬಂಧುರ

ಮಾಯೆಯಾ ಅನರ್ಗಲ ಪ್ರಬುದ್ಧ ಪ್ರಣಾಲಿ!
ಜಹಜಿನಿಕ್ಕೆಲದಿ ಜಿರ‍್ರನೆ ಹಾರುವ ಜಲರಾಶಿ
ಮುತ್ತುಮುತ್ತಾಗಿ ಮಣಿಮಣಿಯಾಗಿ ಜಲಧಿಯೊಳ್
ಬಿಳ್ದು ಮತ್ತೆ ಜಲವ್ವೆಸಿ ನುರ್ಗಿ ಬಹವಾರಿಯ
ಲೀಲಾ ಖೇಲನಮಂ ಕಣ್ತುಂಬ ನೋಡತಿರೆಯಿರೆ
ಪಣಕು ಪಣಕೆನ್ನುತೆ ಜಲಧಿಯೊಳಗೆ ಗುಳುಗಾಡಿ
ಮುಳುಗಾಡುವ ಮೀಂಗಳ ಮೇಣಿತರ ಜೀವಾಳಿ
ಸಮಾವೇಶಂ ದಿಟ್ಟಿಗೆಲ್ಲಿಯುಂ ಬೀಳುತಿರೆ
ಮನಕಲ್ಪಕೆನಿತೆನಿತು ಕಾಯಕಮೊ ಅನಿತನಿತೆ
ಬಳಲ್ಕೆಯ ಆತ್ಮಹತ್ಯೆಗೆ ಮಾಯೆ ಸಾರ್ಚಿದಾ
ಪ್ರಗ್ರಹಂ! ತನಿಗಾಳಿಗುಬ್ಬೆದ್ದ ವಿಕ್ಷುಬ್ಧ
ವಿಸ್ತೃತ ತರಂಗ ತರಂಗಗಳ ಭೈರವೀ
ತಾಂಡವದೊಲ್ ಭಾವನಾವಳಿಯುದ್ರೇಕ ಮಸ್ತಕ
ಮಂದಿರದಲಿ! ಶ್ರೀರಮಣಿ ಮುದದಿಂ ಭಾವನಾ
ಭಾರದಲಿ ದೂರ ಭವಿಷ್ಯದ ವೇದಿಯಲಿ ತಾನೆ
ತಾನ್ವೆಸಿ ಅಂಡಲೆದಳ್ ಸಂಜೀವನವನಂ
ಸಂಭಾವಿಸುತೆ.
ಮುಂದೆರಡು ಮಾಸದಲಿ ಮಹಾ
ಯಾನಂ ಮುಗಿರ್ಚೆ ಇಂಗ್ಲೆಂಡಂ ಸೇರಿದ ಬಳಿಕಂ
ಶ್ರೀವನಿತೆ 'ಮ್ಯಾನಿಂಗ್' ಎಂಬ ಪ್ರಸಿದ್ಧ ಸ್ತ್ರೀ
ಸುಖಾಶ್ರಯದಿ ನೆಲೆಸಿದ ತರುಣದೊಳ್ ಎಡ್ಮಂಡ್
ಗಾಸ್, ಹಿನೇಮನ್ ಮೇಣ್ ಆರ್ಥರ್ ಸೈಮನ್ಸ್-ರ
ಪರಿಚಯವೊದಗಿ ತನ್ನಯ ಕವಿತಾ ದ್ರವ್ಯಮಂ
ವಿಮರ್ಶಿಸಿ ಒರೆಹಚ್ಚಲು ನಲ್ ಅವಕಾಶಮಿರೆ
ಪರಿಪುಷ್ಟಳಾದಳ್ ಯಶೋಮತಿ! ಎಡ್ಮಂಡ್
ಗಾಸ್ ಅವಳ ಇಂಗ್ಲಿಷ್ ಸಾಹಿತ್ಯಮಂ ಓದಿ

ಮನನಗೈದು ''ಇಂತಪ್ಪ ತಾಳಲಯ ಇಂಗ್ಲೀಷ್
ಕವಿಗಳ್ ಬರೆಯಲಾರರೇನೋ ಎನಿಸುವಂತು
ಪ್ರಬುದ್ಧಂ! ನೀಂ ಹುಟ್ಟು ಕವಯಿತ್ರಿ! ನೀನಿಂತೆ
ಮುಂಬರಿದೊಡೆ ಖಂಡಿತ ಉತ್ತಮ ಭವಿಷ್ಯಮಿರ್ಕು.

ಮಗಳೆ ಕೇಳ್! ಇಂಗ್ಲೆಂಡಿನ ರಾಬಿನ್, ಬೆಲ್‌ಬರ್ಡ್,
ಸ್ಕೈಲಾರ್ಕ್ ಪಕ್ಷಿಗಳ್ ಕುರಿತು ಕವನಂ ಬರೆವ
ಶ್ರಮವಂ ಕೈವಿಟ್ಟು ನಿನ್ನ ಸ್ವಂತ ನಾಡಿನ
ಹಣ್ಣು-ಹೂಗಿಡ-ಮರ-ಗುಡಿಗೋಪುರ-ಜನ-ಜಂತು
ಇಂತಾವುದಾದರಂ ಕುರಿತು ಬರೆದು ಭಾರತದ
ವರ ಮಧುರ ದನಿಯ ಕೋಗಿಲೆಯಾಗು! ಇಂಗ್ಲೀಷ್
ಭಾಷೆಯ ಅರಗಿಳಿಯಾಗಬೇಡ!'' ಎಂದು ನಲ್ಮೆಯ
ಉಪದೇಶ ನೀಡಿದರ್ ಮನಂ ಪುಳಕಿತಗೊಳ್ವ
ತೆರಂ!

ಕೇಂಬ್ರಿಡ್ಜಿನ ಗಿರ್ಟನ್ ಕಾಲೇಜ್ ಪ್ರವೇಶ
ಪಡೆದ ಸುದತಿ, ಅಲ್ಲಿಯ ನವೋನವ ಜೀವನೀ
ವಾಹಿನಿಯ ವಿಧಿ ವಿಧಾನಮಂ ಮನವೊಪ್ಪದಿರೆ
ವಿದ್ಯಾಲಯಕೆ ದಿಟ್ಟೆಯೆನೆ ವಿದಾಯಂ ಪೇಳ್ದು,
ಇಟಲಿ ರಾಜ್ಯಕೈದಳ್. ಅಲ್ಲಲ್ಲಿ ಅಡ್ಡಾಡಿ
ಅದರ ಪೂರ್ವೇತಿಹಾಸಮರಿತು ಮನಕಲ್ಪಂ
ಕಡೆದು ನೇಹದಿಂ ಆ ಜನಮನೋಗತಿಯಳೆದು
ದರ್ಶನೀಯ ಸ್ಥಳಂ ಸಂದರ್ಶಿಸಿ ಅನುಪಮ
ತೋಷದಿಂ ಸ್ವಿಜ್ಜರ್‌ಲ್ಯಾಂಡ್-ಭುವಿಗೆ ತಾನೈದಳ್.

ಆ ರಾಜ್ಯದ ಮನ ಮೋಹನೀಯ ನಿಸರ್ಗಸಿರಿ
ಸೌಂದರ್ಯಮಂ ಮನದಣಿಯೆ ನೋಡಿ ಬೃಹತ್ತಮ
ಪರ್ವತ ಶ್ರೇಣಿಗಳ ಸಗ್ಗಸುಧೆಯಂ ಮೊಗೆದುಂಡು
ಹೃತ್ತಾವರೆ ಅರಳ್ದುದು ದಳದಳ ಬಿರಿದವೊಲ್!

ಶ್ರೀರಮಣಿ ಜಗಮಂ ಮರೆತು ಸಂತಸರಸಾನ್ನ
ದುಂಬಿದಳ್ ಮನೋದಧಿ ಕೋಡಿವರಿವನ್ನ. ಕಣ್
ನೋನೋಡಿ ದಣಿವನ್ನ.
ಆಗಳ್ ಸ್ವದೇಶದಾ
ಚಿತ್ತಾರ ಕಣ್ಮುಂದೆ ಸುಳಿಸುಳಿದಳಿಯುತಿರಲ್
ವಿದ್ಯಾದಾರಿದ್ರ್ಯ, ಆರ್ಥಿಕ ದಾರಿದ್ರ್ಯ, ಜ್ಞಾನ
ದಾರಿದ್ರ್ಯಗಳ ಸಂಕಷ್ಟಂ ಘನಿಸಿ ನರಳುತಿಹ
ಶೃಂಖಲಾಬದ್ಧ ಭಾರತ ತನ್ನ ನಿಜಶಕ್ತಿ
ಸಂಪದಂ ಕಳೆಕೊಂಡು ದೀನಾತಿದೀನೆಯೆನೆ
ನರಳ್ವುದಂ ನೆನೆನೆನೆದು ಮನಂ ಕುಗ್ಗಿ ಚಿತ್ತಂ
ಕೊರಗಿದುದು ಕರಗಿ ದ್ರವಿಸಿ ನೀರಾಗಿ ಪರಿವೊಲ್!
ಆ ಕೂಡಲೇ ಹಿಮ್ಮರಳ್ದಳಾ ಸಿರಿಲಕ್ಷ್ಮಿ
ಭಾರತಕೆ ದೇಶೋದ್ಧಾರದೇಕ ಮನದಿಂದಲಿ.
ದೈವಬಲದಿಂ ಕಂಕಣ ಬಲಗೂಡಿಬರೆ ತನ್ನ
ಮನೋವಲ್ಲಭನಿರ್ದ ಡಾ॥ ನಾಯ್ಡು ಅಬ್ರಾಹ್ಮಣ
ಕುಟುಂಬಿಗನಾದೊಡಂ ಲಕ್ಷಿಸದೆ, ಸಮಾಜದ
ಪ್ರಬಲ ವಿರೋಧಮಂ ಎದುರ್ಚಿ ಸುಧೀರೆಯೆನೆ
ಏಕಮನಃಚಿತ್ತದಿಂ 'ಅಸ್ತು' ಎಂದು ಮುಂದೆಯ್ದ
ಸಂದರ್ಭದೊಳ್ ಕಿಂಚಿತ್ ವಿಚಲಿತನಾಗದ
ಅಘೋರನಾಥಂ ವಿಜೃಂಭಣೆಯಿಂ ಕನ್ಯಾದಾನ
ಮಾಡಿದಂ! ಸರೋಜಿನಿ ಗೃಹಸ್ಥಾಶ್ರಮವಂ
ಆನಂದಪೂತ ಮನದಿಂದೆ ಸ್ವೀಕರಿಸಿದಳ್!
ಒಲುಮೆ ತುಂಬಿದ ಸಂಸಾರದಲಿ ನೆಲೆನಿಂದು
ಕರ್ತವ್ಯಮಂ ಮರೆಯದೆ ಸಾಮಾಜಿಕಕ್ಷೇತ್ರಂ
ಪೊಕ್ಕಳ್ ಪತಿಯೊಡಂ, ಬಿಡುವಿಲ್ಲದ ಕಾರ್ಯಮಂ
ಕೈಕೊಂಡು. ಸ್ತ್ರೀಜನರ ಅಸ್ವತಂತ್ರ ಜೀವನೀ

ವಾರ್ಧಿಗೆಂತು ಸಾಂತ್ವನದ ಮಳೆಗರೆವುದೆಂಬುದಂ
ಅರ್ಥೈಸದ ಸನ್ನಿವೇಶದಲಿ, ಅಜ್ಞಾನಿಗಳ
ದುಃಖಭರಿತ ಜೀವನದುದ್ಧರಣಂ ಸಾಧ್ಯಮೇ?
ದುಃಖವನ್ನೆ ದುಃಖಿತಗೊಳಿಪೊಲ್ ಕಡುದುಃಖ......
ಅಂತುಮಲ್ಲದೆ ದೇಶದಿ ಆಗಾಗಳ್ ಉಗ್ರ
ಸಾಂಕ್ರಾಮಿಕ ರೋಗಗಳ್ ಧುತ್ತೆಂದು ಸಂಭವಿಸಿ
ಕಿಚ್ಚಿಟ್ಟು ಸುಟ್ಟವೊಲ್ ಪಟಪಟಾಯಮಾನದಿ
ಜನರ್ ಸಾಯುತಿರೆ ಆಂಗ್ಲಪ್ರಭುತ್ವ ಸಾಯ್ವನಿತು
ಸಾಯಲೆಂದು ನಿರ್ಲಕ್ಷ್ಯ ತೋರ್ವುದಂ ಕಣ್ಣಿರ್ದು
ಕುರುಡಾಗಿರಲಕ್ಕುಮೆ? ಮುಂದೆಯ್ದು ಆಪನಿತು
ಸೇವೆಯಂ ಕೈಕೊಂಬುದಲ್ಲದೆ ಬೇರಿನ್ನುಂಟೆ?
ಸರೋಜಿನಿ ನಾಯ್ಡು ಜನಸೇವೆಗಿಳಿದೊಡಂ ತನ್ನ
ದೈಹಿಕಾರೋಗ್ಯ ಸಂಪದಂ ದೂರದೂರವೇ,
ಎಲ್ಲೊ ನಿರ್ಲಕ್ಷಿಸಿದ ರುಜೆ ಮೈಯ್ಯಾವರಿಸಿದೊಲ್!
ಏಗಳುಂ ಸೋಲು ಗೆಲವುಗಳ್ ಸ್ಪರ್ಧಾಕಣದಲಿ
ಮುಷ್ಟಾಮುಷ್ಟಿಯುದ್ಧದೊಳಿರೆ ಕುಗ್ಗದೆ ಜಗ್ಗದೆ
ದುಡಿದಳ್ ಸೋಲೊಪ್ಪದೆ ಗಾರ್ಧಭ ಮಾಳ್ಕೆಯಲಿ!
ಇಂತಪ್ಪ ಕಜ್ಜದುಜ್ಜುಗದಲಿ ಲೇಖನಕೃಷಿ
ಸಾಧನಾ ಸಿರಿಯಿಂ ಪೊದಳ್ದು ಬೆಳಕಿಗೆ ಬಂದ
**"Golden Threshold", "The bird of
the time", The broken wing,** ಕವನ
ಮಾಲೆಗಳ್ ಇಂಗ್ಲೀಷ್ ಪರಿಣತರ ವೃತ್ತದಲಿ
ಪ್ರಶಂಸೆ ಸುರಿದು ಕವಯಿತ್ರಿಯಂ ಏರಿಸಿರೆ
ಗಗನದೆತ್ತರಕೆ ಬ್ರಿಟಿಷ್ ಚಕ್ರವರ್ತಿ ಮೆಚ್ಚಿ
ಸಂತುಷ್ಟಿಯಿಂದ ''ಕೈಸರ್ ಇ ಹಿಂದ್'' ಎಂದೆಂಬ
ಪ್ರಶಸ್ತಿ ಮೇಣ್ ಚಿನ್ನದ ಪದಕವನ್ನಿತ್ತು
ಅಪಾರ ಗೌರವ ನೀಡಿದಂ!

## ಸರೋಜನಿ ನಾಯ್ಡು

ಮಹಾತ್ಮಾಗಾಂಧೀಜಿಯ ರಾಷ್ಟ್ರೀಯ ಚಳವಳಿ
ಕರೆಗೆ ಓಗೊಟ್ಟು ''ಹೊರಡಲೇ'' ಎಂದೆನೆ ಅದಂ
ಡಾ॥ ನಾಯ್ಡು ವಿರೋಧಿಸಿದರೆ? ಸತಿಯ ಶರೀರಂ
ಸೂಕ್ಷ್ಮ; ಅಶಕ್ತೆ; ಎಂದು ಕೊರಗಿದರೆ? ಹೆಣ್ಣಿಗೆ
ಏಕೆ ಜಗದ ಗೋಳು? ತನ್ನನೆ ತಾಂ ಸೈಪಿದೊಡೆ
ಸಾಲದೇ ಎಂದು ಕೋಡಿದರೆ? ಕೋಕನದ ವರ
ಪೂಜೆ ಗುಡಿಯಲಲ್ತೆ! ಎಂದು ನೊಂದು ನೋವುಂ
ಕಾವುಂ ಭರಿಸಿ ನೈಕಪತಿಯಾದರೇ ಒಡೆಯಾ!
ಇಲ್ಲ, ಇಲ್ಲವೇ ಇಲ್ಲ! ಸಂತುಷ್ಟಿಯಿಂದಲಿ
ಆಶೀರ್ವದಿಸಿ ನಲ್ಮಕ್ಕಳ ಭಾರ ತಾಂ ಪೊತ್ತು
''ಪೋಗು!'' ಎಂದು ಕಳಿಪಿದರ್ಕೈ ದೇಶೋವಿಶಾಲ
ಕಾರ್ಯಕ್ರಮಂ ಗುರಿಗೊಂಡು, ದಗದಗಿಪಗ್ಗಿಯಂ
ಪುಗಲ್! ಇಂತೊಂದು ಧರ್ಮಗತಿ ಭಾರತ ಭುವಿಯ
ಎಲ್ಲ ವರ್ಗೀಯ ನಾರಿಮಣಿಯರ್ಗೆ ಲಭ್ಯಮೆ?
ಸರೋಜಿನಿ ನಾಯ್ಡು ಎಲ್ಲವಗೆಯೊಳ್ ಪುಣ್ಯಾವನಿ!
**'Golden Threshold'** ಕವನ ಸಂಗ್ರಹ
ಸಾರಸ್ವತ ಲೋಕದೊಳ್ ಪ್ರಸಿದ್ಧಿವೊಡೆಯಲಾ
ಕವಯಿತ್ರಿ ಮೈಮರೆತಳೆ? ರಾಜಕೀಯ ತೊರೆದು
ತನ್ನ ಗೃಹ **'Golden Threshold'**ನ ತೂಗು
ಮಂಚದಲಿ ಹಂಸತೂಲಿಕೆಯ ಮೇಲೆ ಕೆಮ್ಮನೆ
ಪವಡಿಸಿದಳೆ? ರಾಷ್ಟ್ರದ ಸಂಕಷ್ಟ ತನ್ನದೆನೆ
ಮುಂದೈದ ನಾರೀಮಣಿ ದೀನದಲಿತರಿಂಗೆ
ಅನೇಕ ಸಲಿ ತನ್ನ ಮನೆಯೆ ಅಭಯಾಶ್ರಮಮೆನೆ
ಆಶ್ರಯಮಿತ್ತು ಆದರಿಸಿದ ಮಾತೃಕಾಮಯೀ!
ಆಂಗ್ಲರ ಸುಡುಗೋಲಿಗಳುಗುವ ಬೆಂಕಿಯ ಜ್ವಾಲೆ

ಎರ್ದೆಗುಂಡಿಗೆಯಂ ನಡುಗಿಸಿತೆ? ಎಲ್ಲೆಡೆಯು
ಎದುರ್ಗೆತ್ತು ಮಹಿಳೆಯರಂ ಪುರಿದುಂಬಿಸುತಲಿ
ರಾಜಕೀಯರಂಗಕೆ ಧುಮುಕಿದಳ್ ಕವಯಿತ್ರಿ!
ಆದೊಡಂ ಸ್ತ್ರೀಜನ ಅಜ್ಞಾನ-ಅಸ್ವಾತಂತ್ರ್ಯ-
ಅವಿದ್ಯೆಗಳಿಂ ನರಳ್ವಕರುಣಾಜನಕ ಸ್ಥಿತಿ
ಹಿಂದೆಳೆದೊಡೆ ರಾಜಕೀಯ ಪ್ರಗತಿ ಕೈಬೀಸಿ
ಕರೆವುದು ಮುಂಗಡೆ! ಮನಂ ರಂಗಣ-ರಿಂಗಣಮೆನೆ
ಮಹಿಳಾಮಣಿಯ ಮನೋಗತಿಯರಿತ ಗೋಪಾಲ
ಕೃಷ್ಣ ಗೋಖಲೆ ನಲವಿಂ ಇಂತೆಂದರ್ "ಮಗಳೇ!
ನೀನೆನ್ನ ಬಳಿ ನಿಂತು ಈ ಗಿರಿ ನಕ್ಷತ್ರಗಳ
ಸಾಕ್ಷಿಯಾಗಿ ಮಾತುಕೊಡು! ದೀಕ್ಷೆತೊಡು! ನನ್ನಯ
ಜೀವನ-ಪ್ರತಿಭೆ-ಹಾಡು-ನುಡಿ-ಕನಸು-ಚಿಂತನೆ
ಎಲ್ಲವೂ ನನ್ನ ಮಾತೃಭೂಮಿಗೆ ಎಂದು! ಎಲೆ,
ಕವಿಕೋಗಿಲೆಯೆ ಗಿರಿಯಮೇಲೆ ನಿಂತು ದರ್ಶನ
ಪಡೆದು ನೀಂ ಕೆಳಗೆ ದುಡಿವರ್ಗೆ ನೆಚ್ಚಿನ ನುಡಿಯ
ಸಂದೇಶನೀಡು! ಬಿಸಿನೆತ್ತರ್ ಕುದಿವವೋಲ್!"
ಆ ನಲ್ನುಡಿಗಳಿಂದೆ ಪುಳಕಗೊಂಡ ಶ್ರೀಮತಿ
ದಿಟ್ಟೆಯೆನೆ ದೃಢ ಹೆಜ್ಜೆಯಿಟ್ಟಳ್ ರಾಜಕೀಯ
ಪಥದಲಿ! ಅತಿಪ್ರಕ್ಷುಬ್ಧಕಾಲ! ಹಿಂದು-ಮುಸ್ಲಿಂ
ವೈಶಮ್ಯ ನೆಯ್ಯನೆರೆದ ಬೆಂಕಿಯೊಲ್ ಧಗಧಗಿಸಿ
ಉರಿದಿತ್ತು. ಮಿತಗಾಮಿ ಅತಿಗಾಮಿ ಪಕ್ಷಗಳ್
ದೂರದೂರವೈದು, ಗೋಖಲೆ ಮತ್ತಿತರ ಪಿರಿಯರ್
ಚಿಂತೆಯಿಂ ಜರ್ಜರಿತಮಾಗಿರಲ್, ರಾಷ್ಟ್ರದೊಳ್
ಅದೃಷ್ಟವಶದಿಂ ರಾಜಕೀಯ ನಭೋದೇಶ
ಕಾರ್ಮೋಡಗಳಂ ಚದರಿಸಿತು! ಹಿಂದೂ-ಮುಸ್ಲಿಂ
ಲೀಗ್ ಸಾವಿರದೊಂಭೈನೂರ ಹದಿಮೂರರಲಿ

ಲಕ್ನೋನಗರದೊಳ್ ಸಭೆಗೂಡಿತು. ಆಗಳದು
ಇತಿಹಾಸ ಪ್ರಸಿದ್ಧ ಮಹಾ ಅಧಿವೇಶನ! ಆ
ಅಧಿವೇಶನ ಮುಸ್ಲಿಂ ಬಂಧುಗಳಿಂದಲೆ ತುಂಬಿ
ತುಳುಕುವ ಸಭೆಯಿರೆ ಮಾತಾಡುವ ಸದವಕಾಶ
ಅಧಿಶ್ರೀಗೆ. ಹೈದರಾಬಾದ್ ನಗರಿ ಹುಟ್ಟೂರು.
ಬಾಲ್ಯದಿಂ ಮುಸ್ಲಿಮರ ಒಡನಾಟ. ಕಿಂಚಿತ್ತೂ
ಸಭಾಕಂಪನಮಿಲ್ಲದ ಕವಿವಾಣಿ ಮೊಳಗಿತು;
ಸಭಿಕರ ಕರತಾಡನ ಮತ್ತೆಮತ್ತೆ ಮೊಳಗುವೊಲ್!
ಅನಂತರ ಸಾವಿರದೊಂಭೈನೂರ ಹದಿನೈದರ
ಕಾಂಗ್ರೆಸ್ ಅಧಿವೇಶನದಲಿ ಸತಿ ಸರೋಜಿನಿ
ವೇದಿಕೆಯನ್ನೇರಿದಳ್! ಅಂದಿನಿಂ ಎಡೆಪಿಡದ
ರಾಜಕೀಯ ಜೀವನ ಕರ್ವೊಗೆಯ ಜಾಲದಿಂ
ಆವರಿಸಿದೊಡಂ ಜಾನದೀವಿಗೆ ಉಜ್ವಲಿಸಿ
ಎಡೆಎಡೆಯಲಿ ಹತ್ತಿಸಿತು ಕರದೀಪ ನಂದದೊಲ್!
ಎಲ್ಲೆಡೆ ಪ್ರಭಾತ್ ಫೇರಿ, ಚಳವಳಿ, ಸ್ವದೇಶಿ
ಸಂಗೀತ, ಸತ್ಯಾಗ್ರಹ ಮುಂತಪ್ಪ ವಿಚಾರ
ಒಂದಾದೊಡೆ ಸಂಧಾನುಸಂಧಾನಗಳ ಮತಿ
ಸಂಘರ್ಷಣೆ ಇನ್ನೊಂದೆಡೆ ಮೇಣ್ ಧರ್ಮಗ್ಲಾನಿ
ಜೀವಹಾನಿ, ದಿನಚರಿ ಭಂಗ, ಆಂಗ್ಲರ ಮುಷ್ಟಿ
ಮರ್ದನ, ಸುಡುಗೋಲಿಗಳ ಉಗ್ರ ಢಂಕಾರ!
ತಾಳಲಾಗದ-ಅನುಭವಿಸಲಾಗದ ಜೀವನ
ಹಿಂಸೆ; ಆತ್ಮಹಿಂಸೆ; ಎನೆ ಒಂದೊಂದು ದಿನವೂ
ರಣಗೋಳು ಕಟುಕರ ಕಸಾಯ ಖಾನೆಯೊಲ್! ಆ
ದುರ್ದಿನದೊಳ್ ವಾಙ್ಮನಂ ಮರ್ದಿಸಿ ಹರಿಸಿದಳ್
ಮುಂದೈದ ಯಶೋಮತಿ ಸಂಸ್ಕಾರ ಸರ್ಪಿಣಿಯೊಲ್!
ಸಾವಿರದೊಂಭೈನೂರ ಹದಿನೈದರಲಿ ಗೋಖಲೆ

ಕಾಲನದಿಯೊಳ್ ಕೊಚ್ಚಿಹೋಗಲ್ ಸರೋಜಿನಿಗೆ
ತನ್ನ ಜೀವನಕೊಂದು ತಿರುವು ನೀಡಿದ ತಂದೆ!
ಭ್ರಾಮಕಾ ಲೋಕದಿಂ ರಾಜಕೀಯ ವೇದಿಯ
ಕೋಲಾಹಲಕ್ಕೆ ಎಳೆದ ಸೂಕ್ಷ್ಮಮತಿಗಾರ!
ದೇಶದ ಕೈದೀವಿಗೆ! ಜನರ ಕಣ್ಮಣಿ! ಇನ್ನು
ಇಲ್ಲವಾದುದು ದಿಕ್ಕೆಟ್ಟಂತಾಗೆ, ಗಾಂಧೀಜಿ
ಮುಂದೈದು ತಳ್ಳೈಸಿ ಮಾರ್ಗದರ್ಶಿಯಾದರ್
ನಿಜಪಿತನವೋಲ್! ಮೇಣ್ ರಾಜಕೀಯ ಗುರುವಿನೋಲ್!
ಸುದತಿ ಮೈಕೊಡವಿ ಎಚ್ಚೆತ್ತಳ್ ಮಹಾಕಾಳಿಯೊಲ್!
ರಾಷ್ಟ್ರ ಸಂಕಷ್ಟದಲಿ ನರಳುತಿರೆ ದುಃಖಿಸಲ್
ಸಮಯಮೆಲ್ಲಿ? ಗಾಂಧೀಜಿ ಸಹಚರಿಯೈಸಿ ರಾಷ್ಟ್ರ
ಸ್ವಾತಂತ್ರ್ಯದ ಸಂಗ್ರಾಮಕಿಳಿದಳ್ ಕಡುಕೆಚ್ಚಿನಿಂ.
ಇಂತಪ್ಪ ವೀರಾಗ್ರಣಿ ಗಾಂಧೀಜಿಗೆ ಒರ್ವ
ಮಾತಾಯಿ "ಅಮ್ಮಾಜಾನ್" ಲಭಿಸಿ ಸಂತುಷ್ಟಿ
ಪಡೆದರ್ ಹೃತ್ಕರಂಡ ತುಂಬಿ ಕೋಟಿವರಿವೋಲ್!
ಕಾಲಗತಿಯಲಿನ್ನೊಂದು ವ್ಯಾಘಾತ ಬಡಿಯಿತ್ತೈ
ಸರೋಜಿನಿಗೆ! ತನ್ನ ಸಕಲ ಸೌಭಾಗ್ಯ ರವಿಯೇ
ಆಗಿರ್ದ ಪಿತ ಅಘೋರನಾಥಂ ಮರಣಿಸಿದಂ!
ಗೋಖಲೆಯವರ ಮರಣದ ದುಃಖವಿಳಿವಮುನ್ನ
ಧುತ್ತೆಂದು ಒದವಿದ ಮರಣಸಂಕಟ ಮಗಳಂ
ಧೃತಿಗೆಡಿಸಿತು. ತಂದೆ-ತನ್ನೆಲ್ಲ ಪ್ರಗತಿಗೆ
ಮುಖ್ಯಕಾರಣನಾದ ತಂದೆ-ತಿರುಗಿ ಬಾರದ
ಹಾದಿ ಹಿಡಿದುದು ದುಃಖಪೂರದಾ ನಾಂದಿಯೆನೆ
ತಹತಹಿಸಿರೆ ಮನಂ; ಮಹಾತ್ಮಾಗಳುಂ ಗಾಂಧೀಜಿ
ನೆರವಾದರ್ ನೊಂದ ಮನೋದಧಿಗೆ ಸಾಂತ್ವನದ
ತೀರವರೆಯೆ. ಮಿದು ಹೃದಯದ ಶ್ರೀರಮಣಿ ಮಿಗೆ

ಸಾವರಿಸಿಕೊಳೆ ಮತ್ತೆ ಮೊದಲಾದುದೈ ದಿನಚರಿ
ಎಂದಿನೊಲ್! ಆಗಾಗ ತನ್ನೂರ ಗುರಿಗೊಂಡು
ಬರುತಿರಲ್ ಸಂಸಾರ ಸುಖಸಾರ ಮೇಣೆಲ್ಲಿ
ಇರ್ದೊಡಲ್ಲಿ ಸಾಮಾಜಿಕ ಸಂಕ್ರಾಂತಿ! ಮೇಣ್
ರಾಜಕೀಯ ವಿಕ್ರಾಂತಿ; ಅದಮ್ಯ ಸಂಗ್ರಾಮದ
ಉತ್ಕ್ರಾಂತಿ! ಕಾವ್ಯಕಾನನಂ ಕಿಡಿ ಮಳೆಯಿಂದೆ
ಪಿಂದುಳಿದುದು ನಿತ್ಯ ಸಂಜೀವನದೋಜೆಯಿಂ.
ಸಾವಿರದೊಂಭೈನೂರಹತ್ತೊಂಭತ್ತರಲಿ ಆಂಗ್ಲ
ಪ್ರಭುತ್ವಂ ಅತಿಧೂರ್ತತನದಿಂ **'Arms Act'**
ಜಾರಿಗೊಳಿಸಿತು! ದುಷ್ಟಕಾಯಿದೆಯ ಪ್ರಕಾರ
ಯಾವೊಬ್ಬ ಭಾರತೀಯಂ ಕೋವಿ ಮುಂತಪ್ಪ
ಆವೊಂದು ಆಯುಧಂ ಪೊಂದುವುದು ನಿಶಿದ್ಧಂ!
ಸರೋಜಿನಿ ಅದರ ಪ್ರತಿಭಟನೆಗೆ ಧೈರ್ಯದಿಂ
ಮುಂಗೆತ್ತಳ್! ಹೋರಾಟ-ಆಂದೋಳನ ಮತ್ತೆ
ಭುಗಿಲೆದ್ದುದು ಭಯಂಕರ ಕೆನ್ನಾಲಿಗೆ ಚಾಚಿ!
ಮೊದಲನೆ ಮಹಾಯುದ್ಧದಲಿ ಆಂಗ್ಲಮಹೋದಯರ್ಗೆ
ಭಾರತವೆಸಗಿರ್ದ ಸಹಾಯಕ್ಕೆ ಪ್ರತಿಫಲ
ರೂಪದಲಿ 'ಡೋಮಿನಿಯನ್ ಸ್ಟೇಟಸ್'' ಕೊಡಲೊಪ್ಪಿ
ನಂತರ ನಿರಾಕರಿಸಿದ ಧೂರ್ತರ ಕುತಂತ್ರಕೆ
ಮನನೊಂದು ರೊಚ್ಚಿನಿಂ ಕೆಚ್ಚಿನಿಂ ವಾಗ್ದಾಳಿ
ಎಬ್ಬಿಸಿದ ಭಾರತ ಜನತೆಯಂ ದಮನಗೊಳಿಸೆ
'ರೌಲಟ್' ಕಾನೂನು ರೂಪುಗೊಂಡಿತು! ಜನಕೋಟಿ
ಸಿಡಿದೇಳೆ ಭಾರತೀಯ ಮುಖಂಡರೊಗ್ಗೂಡಿ
ಶಾಸನಂ ವಿರೋಧಿಸಿ ಸತ್ಯಾಗ್ರಹಾಸ್ತ್ರಂ
ತೊಡುವ ಕತಮಂ ಜನತೆಗರುಹೆ ಸತಿ ಭಾರತದ
ಪ್ರವಾಸಂ ಕೈಕೊಂಡಳ್ ಗಾಂಧೀಜಿಯವರೊಡಂ.

ಬ್ರಿಟಿಷರ ಮೇಲಿರ್ದ ಅಲ್ಪಸ್ವಲ್ಪ ನಂಬಿಕೆ
ತೊಟ್ಟು ಕಳೆದ ಹೂವಿನೊಲ್ ಮುದುಡಿಹೋಹೆ ಜನ ತನು
ಮನಗಳ್ ಉರಿದೆದ್ದುವು ಬೆಂಕಿಕಿಡಿ ತಾಗಿರ್ದ
ಹುಲ್ಲಿನ ಬಣಂಬೆಯೊಲ್! ಜನಕೋಟಿ ಸಿಟ್ಟಿನಿಂ
ರೊಚ್ಚಿನಿಂ ಕೆಚ್ಚಿನಿಂ ಬೆಂಬಲಂ ನೀಡಿದರ್
ಸತ್ಯಾಗ್ರಹಕೆ!
ಆಗಳ್ ಆಂಗ್ಲರ್ ಸರೋಜಿನಿಯು
ಮಹಾಕಾಳಿಯೊಲ್ ಸಿಟ್ಟಿಗೆತ್ತಿರೆ, ತಮ್ಮೊಂದು
ಕುತಂತ್ರ ಕುಟಿಲಮಂ ನಯವಿನಯದಿಂ ಮುಚ್ಚಿ
ಬಿರುದು ಬಾವಲಿಯೊಡನೆ ಪೆರ್ ಹುದ್ದೆಯಂ ನೀಡಿ
ಗೌರವಿಸುವೊಂದು ಆಶ್ವಾಸನೆಯಲಿ ಬೆನ್ತಟ್ಟಿ
ಬಗ್ಗಿಸಲ್ ಪ್ರಯತ್ನಂಬಟ್ಟೊಡಂ ಸೋಲದಿರೆ
ಆ ದಿಟ್ಟೆ! ಬೆರಳ್ ಕಚ್ಚಿದರ್ ಅಚ್ಚರಿಗೆತ್ತು!
ಚಳವಳಿ ಹದ ಮೀರಿತು. ಸರೋಜಿನಿ ಸ್ತ್ರೀಯರಂ
ಪುರಿದುಂಬಿಸುತಿರೆ ಸ್ತ್ರೀಯರ್ ಮಕ್ಕಳ್ ಮರಿಗಳ್
ಅಕಾಡಕಿಳಿದರ್ ಉಸಿರ್‌ಗಟ್ಟುವೊಲ್ ಒಗ್ಗೂಡಿ!
ನಿರಾಯುಧಿ ಜನಜಂಗುಳಿಯುಂ ನುಗ್ಗಿ ಬರುತಿರೆ
ಸೋಲೊಪ್ಪಿದ ರೊಚ್ಚು ಜಲಿಯನ್‌ವಾಲಾ ಬಾಗಿನ
ಹತ್ಯಾಕಾಂಡದ ಪ್ರಕರಣಕೆ ನಾಂದಿ ಹಾಡಿತು!
ಅಂತಾದೊಡಂ ಜಗ್ಗದೆ ಬಗ್ಗದೆ ರಾಷ್ಟ್ರದಾ
ನರನಾಡಿಗಳಲಿ ಹುಚ್ಚೆದ್ದ ಕೆನ್ನೆತ್ತರಿನ
ಪ್ರವಾಹ ಬಿಸಿಯೇರುತಿರೆ ಧೂರ್ತಾಂಗ್ಲ ಜನ
ಕೈಕೈ ಹಿಸುಕಿಕೊಂಡರ್ ತಿಂದು ತೇಗಿದೊಡಲ್
ಉರಿಯಿಂದೆ ಮತ್ತೆ ಮತ್ತೆ ಮೇಣ್ಮತ್ತೆ!
ಅತೀವ
ಕಾರ್ಯಭಾರದೊತ್ತಡದಿಂದೆ ದೇಹಸ್ಥಿತಿಯ

ಹದಗೆಡುತಿರೆ ಚಿಕಿತ್ಸೆಯ ನೇಮದಿ ವಿದ್ಯಾ
ಸರಸ್ವತಿ ಪಯಣಿಸಿದಳ್ ಲಂಡನ್ ನಗರಕ್ಕೆ!
ಪ್ರಖ್ಯಾತ ಕೆಂಪುಜನರ ಹೊನ್ನಾಡು! ಚಿಕಿತ್ಸೆ
ಮಾತಿರಲಿ. ಸಾರ್ವಜನಿಕವೇದಿಕೆಗಳನೇರಿ
ಆಂಗ್ಲರ ಅನೀತಿ ಅನಾಚಾರಮಂ ಜಾಲಾಡಿ
ಲೋಕದೋಜೆಗೆ ಒರೆಹಚ್ಚಿ ಕಣ್ಕಿವಿಗಳಂ
ಸಳೆದಳಿತ್ತಲ್ ಸೂಜಿಗಲ್ಲಿನೊಲ್! ನಂತರಂ
ಭಾರತವನಿತೆಯರ್ಗೆ ಮತದಾನ ನೀಡುವಾ
ಹಕ್ಕಿಗಾಗಿ ಆದ್ಯೋಪಾಂತ ವಾದಿಸಿ ಮೇಣ್
ಚರ್ಚಿಸಿ ಜನಜೀವನ ನಾಗರೀಕರಿಸಲ್ಕೆ
ಶ್ರಮವಂ ಶ್ರಮಿಸಿ ದುಡಿದ ಮಹಾನ್ ರಮಣೀ
ಮಣಿ! ಮೇಣ್ ಅಖಿಲ ಭಾರತ ಹೋಂರೂಲ್‌ಲೀಗ್
ನಿಯೋಗದ ಮಂಡಲಿಯ ಸದಸ್ಯಳೆನೆ ಇಂಗ್ಲೆಂಡ್
ಪಾರ್ಲಿಮೆಂಟಿನ ಮುಂದೆ ಭಾರತಕೆ ದೊರೆಯಲೇ
ಬೇಕಾದ ನ್ಯಾಯ ಮೇಣ್ ಸ್ತ್ರೀಯರ ಸಮಾನತಾ
ಹಕ್ಕು ಭಾದ್ಯತೆಗಳಂ ಪಡೆಯೆ ಮನತುಂಬಿ ಎದೆ
ತುಂಬಿ ವಾಗ್ಜಾಲಂಪರಿಸಿದಳ್ ಆಂಗ್ಲಮತಿ ತಾಂ
ಬೆಚ್ಚಿ ಮಿಡುಕುವೊಲ್!
ತದನಂತರಂ ಸರೋಜಿನಿ
ಪಯಣಂಗೈದು ಸ್ವಿಡ್ಜರ್‌ಲ್ಯಾಂಡಿನ ಜಗತ್ ಸ್ತ್ರೀ
ಸಮ್ಮೇಳನದಲಿ ಭಾಗವಹಿಸಿ ಧೀಮಂತಿನಿಯರ
ಮಧ್ಯೆ ಕಲಕಂಠದಲಿ ಕೇಳಿಸಿದ ಭಾಷಣಂ
ಪ್ರತಿಭಾನ್ವಿತಮಿರ್ದು ಭಾರತಕೆ ಕೀರ್ತಿಯಂ
ತಂದುದು ಮಾತ್ರಮಲ್ತು! ಜನ್ಮಪುನೀತಮಾಯ್ತು
ಪೆಣ್ಮಣಿಯೈಸಿ!
ರಾಜಕೀಯ ಗುರು ಗಾಂಧೀಜಿ

ಅಡಿದಾವರೆಗಳಲಿ ತನ್ನೆಲ್ಲ ಆಗು-ಹೋಗುಗಳ
ಮುಡುಪಿಟ್ಟು, ಗುರುವಿನ ತತ್ವ ಪ್ರತಿಪಾದನೆಯಂ
ಕಾವ್ಯವಾಣಿಯಲಿ ಪ್ರಸಾರಮಾಡಿ ಗುರುವಿಂಗೆ
ಒಮ್ಮನ-ಒಮ್ಮತಗಳಿಂ ಭಕ್ತಿಭಾವ ತೋರುತಿರೆ,
ಗಾಂಧೀಜಿಯುಂ ತನ್ನ ಪ್ರತಿರೂಪಂ ಕಂಡರ್
ಅವಳಲ್ಲಿ! ಸರೋಜಿನಿ ಕೇವಲ ಶಿಷ್ಯೆಮಾತ್ರಮೇ?
ತಂಗಿ-ತಾಯಿ-ಮಗಳು-ಗೆಳತಿ ಎಲ್ಲಾ ಅವಳೇ?
ಸಾವಿರದೊಂಭೈನೂರ ಇಪ್ಪತ್ತೊಂದರಲಿ ಭಾರತಕೆ
ಬಂದ ಪ್ರಿನ್ಸ್ ಆಫ್ ವೇಲ್ಸರ ಭೇಟಿಯಂ ಎಲ್ಲ
ಮುಖಂಡರ್ ನಿಷೇಧಿಸಿ ಬ್ರಿಟಿಷರ ಮರ್ಯಾದೆಗೆ
ಭಂಗಬರೆ, ಕಾಂಗ್ರೆಸ್ ಹುರಿಯಾಳ್ಗಳಂ ಸೆರೆಗೆ
ತಳ್ಳಿತು ಬ್ರಿಟಿಷ್ ಪ್ರಭುತ್ವ! ಗಾಂಧೀಜಿಗೆ ಆರು
ವರ್ಷಗಳ ಶಿಕ್ಷೆಯಾದೊಡೆ ಸರೋಜಿನಿಗೆ ಒಂದು
ವರ್ಷ ಶಿಕ್ಷೆ. ಗಾಂಧೀಜಿ ಜೈಲಿಗೆ ಪೋಗುವಂದು
''ಭಾರತದ ಐಕ್ಯ ನಿನ್ನಕೈಯಲ್ಲಿಟ್ಟಿರುವೆ;''
ಎಂದು ಬೆಸಸಿದರ್ ಸರೋಜಿನಿಗೆ! ಅಂತಪ್ಪ
ಪ್ರಭಾವ ಸಂಪನ್ನೆ! ಹರಿತಬುದ್ಧಿಯ ಸ್ತ್ರೀಮೂರ್ತಿ!
ಕರ್ತವ್ಯ ಪರಾಯಣೆ!

ಸಾವಿರದೊಂಭೈನೂರ
ಇಪ್ಪತ್ತೈದರಲಿ ಕಾಂಗ್ರೆಸ್ ಅಧಿವೇಶನಕೆ ಸತಿ
ಸರೋಜಿನಿ ಅಧ್ಯಕ್ಷಿಣಿ! ಅಜ್ಞಾನ-ಅವಿದ್ಯೆ
ಘೋಷಾ ಪದ್ಧತಿ ಬಾಲ್ಯವಿವಾಹ ಮುಂತಪ್ಪ
ರೂಢಿಗಳ್ ವಿಜೃಂಭಿಸುತಿರ್ದ ದಿನಗಳಲ್ಲಿ
ಸ್ತ್ರೀಮೂರ್ತಿ ಕಾಂಗ್ರೆಸ್ ಮಹಾ ಸಂಸ್ಥೆಯ ಅಧ್ಯಕ್ಷ
ಪದಕ್ಕೇರುವುದೆಂದೊಡೆ ಸಾಮಾನ್ಯಮಲ್ತು! ಆ
ಮಹಾ ಸಂಸ್ಥೆಯ ಅಧ್ಯಕ್ಷವೇದಿಕೆ ದಿಟ್ಟೆಯನೆ

ಏರಿ ''.......ತೊಟ್ಟಿಲುದೂಗಿ ಜೋಗುಳಂ ಪಾಡಿದಾನು
ಭಾರತಮಾತೆಯ ನಿತ್ಯಪ್ರತೀಕಮಾದ ನಾನು
ಇಂದು ಸ್ವಾತಂತ್ರ್ಯ ಜ್ಯೋತಿಯಂ ಬೆಳಗಲಿರುವೆಂ!
ಇಂತಪ್ಪ ಸಂದಿಗ್ಧ ಸಮಯದೊಳ್ ಎನ್ನಂ
ಅಧ್ಯಕ್ಷಪದಕೇರಿಸಿ ಪಿಂತೆ ಶ್ರೇಷ್ಠಯುಗದಲಿ
ಸ್ತ್ರೀಗೆ ದೊರೆತಿರ್ದ ಸ್ಥಾನಮಂ ರೂಢಿಗೆ ಇಂದು
ತಂದಿಟ್ಟಿದ್ದೀರಿ! ಎನ್ನಲ್ಪತೆಯ ಅರಿವೆನಗಿರ್ಪ್ಪುಂ.
ಅರಣ್ಯದಿ ಅಂಡಲೆದ ಸೀತೆಯ ಕೆಚ್ಚು ಮೇಣ್
ಯಮನಂ ಎದುರಿಸಿದ ಸಾವಿತ್ರಿಯ ನೆಚ್ಚು ಎನ್ನ
ಕಾರ್ಯರಂಗದಲಿ ನೆರವಾಗಲಿ. ಸ್ವಾತಂತ್ರ್ಯ
ಹೋರಾಟದಲಿ ಭೀತಿ ಅಕ್ಷಮ್ಯ ದ್ರೋಹಮೆನೆ
ನಿರಾಶೆ ಅಕ್ಷಮ್ಯ ಅಪರಾಧ......!'' ಇತ್ಯಾದಿ ಹರಿದ
ವಾಕ್ಪ್ರವಾಹ ಸಭಿಕರ ಮನಮನವಂ ಮುಟ್ಟಿತು.

ಸಾವಿರದೊಂಭೈನೂರ ಇಪ್ಪತ್ತೆಂಟರಲಿ ದೂರ
ಅಮೆರಿಕೆಯ 'ಕ್ಯಾಥರೀನ್ ಮೇಯೋ' ಎಂದೆಂಬ
ಮಹಿಳೆ ಭಾರತಕ್ಕೈದು ಅಲ್ಲಲ್ಲಿ ಸಮೀಕ್ಷಿಸಿ
ಕುವಿಚಾರಗಳಂ ಮಿಗೆ ಕಲೆಹಾಕಿ ತನ್ನೊಂದು
ನಿರೂಪಣೆಯೊ ಎನಲ್ಕೆ 'ಮದರ್ ಇಂಡಿಯಾ' ಎಂಬ
ಪುಸ್ತಿಕೆ ಬರೆದು ಪ್ರಕಟಿಸಿದಳ್. ಅದರ ಚಿತ್ರ
ಸಾಕ್ಷ್ಯಮೆನಲ್ ಭಾರತ ಕೊಚ್ಚೆಗುಂಡಿ! ಸೂಳೆಗೇರಿ!
ಇಂಥದರೊಳ್ ತಮ್ಮಂ ತಾವೆ ಆಳಿಕೊಳ್ವನಿತು
ಧೀಮಂತರಿಲ್ಲಮೆಂದು ಒತ್ತಿ ತಿಳಿಸಿದ್ದಳ್!
ಭಾರತಮಂ ತುಚ್ಛೀಕರಿಸುವುದೊಂದೇ ಧ್ಯೇಯದಲಿ!

ಮಾಹಾತ್ಮಾ ಗಾಂಧೀಜಿ ಅದನೋದಿ ''ಗಟಾರದ
ಇನ್ಸ್‌ಪೆಕ್ಟರ್ ವರದಿ'' ಎಂದು ಒಂದೇ ನುಡಿಯಲಿ
ಅದರ ಬೆಲೆಯಂ ನಿರ್ಧರಿಸಿದರೆನೆ ಅಲ್ಲಿಗೇಂ

ಮುಗಿದುದೆ? ಗಣ್ಯವ್ಯಕ್ತಿಯೊರ್ವನಂ ಇಲ್ಲಿಂದ
ಕಳಿಪಿ ಆ ನಾಗರಿಕರಿಂಗೆ ಸತ್ಯಾಂಶಮಂ
ತಿಳಿಯ ಪಡಿಸುವ ಅವಶ್ಯಕತೆಯಿರೆ, ಸರೋಜಿನಿ
ಭಾರತ ಪ್ರತಿನಿಧಿಯೈಸಿ ಅಮೇರಿಕೆಗೆ ಪೋಗಿ
ಭಾರತೀಯ ಸಂಸ್ಕೃತಿ, ಭಾರತೀಯ ಸ್ತ್ರೀತ್ವ
ಭಾರತೀಯ ಆಕಾಂಕ್ಷೆ, ಭವ್ಯ ಭವಿಷ್ಯ ಇತಿ
ವಿಚಾರಂ ಬಣ್ಣಿಸಿದಳ್ ನಿರರ್ಗಲ ನಿರ್ಮಲ ವಾಣಿಯಲಿ.
ಮಿಸ್ ಮೇಯೋ ಹರಡಿದ್ದ ದುರ್ಭಾವನೆ ಗರಿಕಳೆದ
ಹಕ್ಕಿಯೊಲ್ ಮದುಡಿತು. ದಶದಶಮಾನಗಳ ಮುನ್ನ
ಸ್ವಾಮಿ ವಿವೇಕಾನಂದರು ಧಾರ್ಮಿಕ ಕ್ಷೇತ್ರದಲಿ
ಗೈದ ಅದ್ಭುತ ಪ್ರಚಾರ ಕಾರ್ಯಮಂ ಸರೋಜಿನಿ
ಸಾಮಾಜಿಕ-ರಾಜಕೀಯ ಕ್ಷೇತ್ರಗಳಲಿ ಧೈರ್ಯ
ಸ್ಥೈರ್ಯದಿಂ ಮನೋರಂಜಕ ಶೈಲಿಯಿಂಗೈದು
ಉಪಕರಿಸಿದಳ್. ಕವಿವಾಣಿ ಮನಮನಮಂ ಮುಟ್ಟಿ
ಜೋಗುಳಿಸಿತು. ಆಫ್ರಿಕೆಯ ಭಾರತೀಯರ್ಗಾದ,
ಅನ್ಯಾಯದ ಮೊಳಗಂ ಕೇಳಲಾಗದೆ ನೊಂದು
ಮರುಗಿ ಆ ನತದೃಷ್ಟರ ಕರೆಗೆ ಓಗೊಟ್ಟಳ್.
ಕೆನ್ಯಾ ತಲುಪಿದ ಸರೋಜಿನಿ ಅಲ್ಲಿನ ಜೀವನ
ಪರಿಸ್ಥಿತಿಯಂ ಪರಿಶೀಲಿಸಿ ಭಿನ್ನ ಭಿನ್ನ ಪ್ರಾಂತ
ಸುತ್ತಿ ಭಾರತೀಯರ ಆತ್ಮೀಯ ಭೇಟಿಯಿಂ
ಮನಮನವರಿತು ಅವರವರ ಕರ್ತವ್ಯದರಿವಂ
ಬೋಧಿಸಿ, ಹೃನ್ಮನದೊಳ್ ಆತ್ಮವಿಶ್ವಾದಗ್ಗಿ
ಧಗಧಗ ಉರಿಸಿ ಜೀವನೀಯ ದೀಪಾಲೋಕದ
ಕುಡಿಯೇರಿಸಿ ಪುರುಷಂ ತುಂಬಿದಳ್!
ಆ ಧೀರ
ನಾರಿ ಸಂಚರಿಸಿದೆಡೆಯಲೆಲ್ಲಂ ಮೊಳಗಿತ್ತೈ

ಸಿಡಿಲ್ ಧನಿ ! ಭಾರತೀಯರ ಸುಪ್ತ ಚೇತನವ
ಬಡಿದೆಬ್ಬಿಸುವವೊಲ್ ! ಕರ್ತವ್ಯ ಪ್ರಜ್ಞೆಯರಿತು
ಜಾಗೃತಗೊಳ್ವವೊಲ್ ! ಇಂತೊಂದು ಕಳ್ತಲೆಯ
ತೆರೆಯಂ ಪವ್ವನೆ ಶೀಳ್ದ ಸರೋಜಿನಿಯ ಕೀರ್ತಿ
ಪರಿಮಳಂ ಹಬ್ಬಿದುದು ಮೊಲ್ಲೆಯ ಪರಿಮಳದೊಲ್ !
ಮೇಣಲ್ಲಿಂದೆ ರೊಡೇಷಿಯಾ ಮತ್ತಿತರ
ದೇಶಗಳ ಪರ್ಯಟನೆಗೈದು ಭಾರತೀಯರ
ಸ್ಥಿತಿಗತಿಯರಿತು ಧೈರ್ಯಸ್ಥೈರ್ಯಂ ತುಂಬುತಲಿ
ಸರ್ವತೋಮುಖ ಚೈತ್ರಯಾತ್ರೆಗೈದು ಜತನದಿ
ಪಿಮ್ಮರಳಿದಳ್ ಭಾರತಕೆ ! ಯಾತ್ರೆ ಫಲಿಸಿದೊಡಂ
ಆಂಗ್ಲ ಮಹೋದಯರ ಮನದ ಕಿಂಡಿಗೆ ಸ್ವಾತಂತ್ರ್ಯ
ಬೇಡಿಕೆ ಪುಗದೆ ಪಿಂದುಳಿಯೆ ಮತ್ತೆ ಚಳವಳಿಗೆ
ಕರೆಕೊಟ್ಟರ್ ಗಾಂಧೀಜಿ. **Quit India !**
ಘೋಷಣೆ ಗಗನಭೇರಿಯಾಗಿ ಸಭೆ ಮೆರವಣಿಗೆ
ಘೋಷಣೆ-ಗದ್ದಲ-ಕಾನೂನುಭಂಗ ಮುಂತಪ್ಪ
ಸತ್ಯಾಗ್ರಹ ನೆಲೆಗೊಂಡು ದಿನಚರಿ ಹಾಳಾಯ್ತು;
ಆಂಗ್ಲರಿಗೆ ಗೋಳಾಯ್ತು ; ಜೇಲು ತುಂಬಿ ತುಳುಂಕಿ
ದಿಕ್ಕೆಟ್ಟೊಡಂ, ನುಗ್ಗಿ ಬರುತಿದೆ ಜನಸಾಗರ !
ಕೆನ್ನೆತ್ತರ ಕೋಡಿ ಹರಿದೊಡಂ, ಪೆಣಗಳ್ ನೆರೆ
ಉರುಳಿದೊಡಂ, ಮೆಯ್ಯ ಚರ್ಮ ಹರಿದೊಡಂ ಜಗ್ಗದ
ಜನವಾಹಿನಿಯ ಉಬ್ಬರಂ ಇಳಿಯದು. ಸ್ತ್ರೀಯರ್
ಮಕ್ಕಳ್ ಮುಂದಿರ್ದ ದಂಡಿನ ಘೋಷಣೆ ಆಂಗ್ಲರೆ
ಭಾರತ ಬಿಟ್ಟು ತೊಲಗಿರಿ ! **Quit India !**
ಗಾಂಧೀಜಿಯ ಪ್ರಾಯೋಪವೇಶ ಅದೆಷ್ಟು ಬಾರಿ
ನಡೆದಿತ್ತೊ ಎಷ್ಟೆಷ್ಟು ಬಾರಿ ಜೇಲು ಕಂಡು
ಕತ್ತಲೆ ಗವಿಯಲಿ ಉಳಿದಿದ್ದರೊ ಜಗ ಬೆಳಕಿಗೆ

ದೂರಾಗಿ! ಅದೆಲ್ಲಕೂ ಕೊನೆಗಾಲಮೆಂದೆನಲ್
ಪೊದಳ್ದುದು **Quit India** ಚಳವಳಿ!
ಗಾಂಧೀಜಿ ಸಹಿತ ದೇಶೀಯ ಮುಖಂಡರೆಲ್ಲರ್
ಜೇಲಿನ ಗವಿಗೆ ದೂಡಲ್ಪಟ್ಪೊಡಂ ಬ್ರಿಟಿಷರ
ಕೈ ಸಾಗದೆ ಆಂದೋಳನದ ಅತುಲನೀಯ
ಅಶಾಂತಿಯೋಜೆಯಂ ತಾಳಲಾರದೆ ಆಂಗ್ಲರ್
ಅಧಿಕಾರಮಂ ಬಿಟ್ಟು ತೋಲಗಿದರ್ ಭಾರತದ
ಸವಿಸ್ತಾರ ಭೂಮಿಯಂ ಬಿಟ್ಟು ಹೋಗಲಾರದೆ,
ದೋಚುವನಿತು ದೋಚಿದರ್ ನಲ್ ಸಂಪತ್ ಮೇಣ್
ಹೊನ್ನು ವಜ್ರ ಮುಂತಪ್ಪ ಬಹುಮೂಲ್ಯ ವಸ್ತು
ವಸ್ತುಗಳಂ! ಕೊನೆಗೆ ಉಳಿದುದು ಹಿಂಡಿ ಹೀರಿ
ಹಿಪ್ಪೆಯಾದ ಭಾರತಿ!
ಮುಸಲರು ಬಿಡದ ಪಟ್ಟು!
ರಾಷ್ಟ್ರವಂ ಇಬ್ಭಾಗಗೊಳಿಸಿತು. ಗಾಂಧೀಜಿಯ
ನೇತೃತ್ವದಲ್ಲಿ ಮುಖಂಡರೆಲ್ಲರ್ 'ಅಸ್ತು' ಎನಲ್
ರಾಷ್ಟ್ರಿಯ ಸರ್ಕಾರ, ಪ್ರಾಂತೀಯ ಸರ್ಕಾರ
ಒಡಮೂಡಿ ಭಾರತೀಯರ್ ಅಧಿಕಾರ ಸೂತ್ರ
ಕೈಕೊಂಡರ್. ಆಗಳ್ ಗಾಂಧೀಜಿಯ ಒತ್ತಡ
ಮಿಂಚಿ ಬರೆ ಸರೋಜಿನಿ ಉತ್ತರ ಪ್ರದೇಶದ
'ಗೌರ್ನರ್' ಸುಸೇವೆಯಂ ಸಲ್ಲಿಸಿದಳ್ ರಾಷ್ಟ್ರಕೆ!
ವೈಸ್‌ರಾಯ್ ಆಗಲು ಸಮರ್ಥೆ ಎನಿಸಿಕೊಂಡ
ಸರೋಜಿನಿ ಅಧಿಕಾರಿ ಗದ್ದಿಗೆಯಂ ಒಲ್ಲದ
ಮನದಿಂದಲೇ ಏರಿರ್ದು ತನ್ನಯ ಪಾತ್ರಮಂ
ಸುಸೂತ್ರತೆ-ಸರಳತೆ-ಸಜ್ಜನಿಕೆಗಳಿಂದೊಪ್ಪಿ
ಪ್ರಜ್ವಲಿಸಿ ಕೇವಲ ಇಪ್ಪತ್ತು ಮಾಸಗಳ
ಅಧಿಕಾರದಲಿರ್ದು ಸಮಸ್ತ ದೇಸೀಯರಿಗೆ

ದಾರಿದೀಪವಾಗಿ ಸಾವಿರದೊಂಭೈನೂರ
ನಲವತ್ತೊಂಭತ್ತನೇ ಮಾರ್ಚಿಯ ಎರಡನೇ
ತೇದಿ ಲಕ್ನೋ ನಗರಿಯಲಿ ದೈವ ಸಾನಿಧ್ಯ
ಪಡೆದು ಧನ್ಯಳಾದಳ್-ಪಾವನವಾಯಿತು ಆತ್ಮ !
ನವೋಜ್ವಲ ಭಾರತ ರಮಣೀಮಣಿ ಸರೋಜಿನಿ
ಸರೋವರ ಕನ್ಯೆಯೊಲ್ ವಂಶೋತ್ಫುಲ್ಲಮಾನಿನಿ
ತಾನಾಗಿ, ಭಾರತದ ಜ್ಯೋತಿಯಂ ಹಿಡಿದೆತ್ತಿ
ದೀನಾತಿದೀನರಿಗೆ ಮಾರ್ಗದರ್ಶಿನಿಯಾಗಿ
ಮಿಂಚಿ ಮರೆಯಾದಳ್ಳೆ ನೇಪಥ್ಯವನ್ನೇರಿ !
ಮಲ್ಲಿಗೆ ಗಿಡದಿ ಮಲ್ಲಿಗೆಯಲ್ಲದೆ ಬೇರೊಂದು
ಅರಳಲಕ್ಕುಮೆ? ಮೊಲ್ಲೆಗಿಡ ಸಂಶೋಭಿ ಮಲ್ಲಿಕಾ!

— o —

# ಮೀರಾಬಾಯಿ

(ಆಧಾರಿತ)

ಅಖಿಲ ದೇಶೋವಿಶಾಲ ಸಮಶೀತೋಷ್ಣ ಪರಿ
ಪುಷ್ಟಿಕರ ವಾತಾವರಣಂ! ಪರಮ ಪವಿತ್ರ
ಜಲ ಸಲಿಲ ತೀರ್ಥವಾರಾಹೀ! ನಿಖಿಲ ಪುಣ್ಯ
ಕ್ಷೇತ್ರಾದಿ ಪಾವನಕರೀ! ಜನನೀ! ಭಾರತೀ!
ಎಮ್ಮೊಳ್ ನೆಲ ಜಲ ಸಮೃದ್ಧಮಿರಲೇನೊಡೆಯಾ!
ಜೀವನೀ ಕಾಂತಾರ ಕಡು ಕಳ್ತಲೆಯ ಬೀಡು!
ಅಜ್ಞಾನ-ದಾರಿದ್ರ್ಯ-ದುಃಖ-ಸಂಕಷ್ಟಗಳ
ಪರಿಪಾಡು! ಬೆಂದವರ್, ನೊಂದವರ್ ಕಾಂಬರೇಂ
ತವ ಸಗ್ಗದ ಸಿರಿನಾಡಂ! ಭವ ಬಂಧನಮಲ್ತೆ,
ಜನ್ಮ ಜನ್ಮಾಂತರಗಳ ಕರ್ಮಕೆ ನಿಡುಬುತ್ತಿ?
ಈ ಜಗದ ಜಂಜಡವನೇನೆಂಬೆನೊ ಒಡೆಯಾ!
ಏಗಳಂ ಎಂತಿರ್ದೊಡಂ ದುಃಖಸೇತುವಂ
ಪಾಯದೆ ಸುಖಶಾಂತಿಯ ತೀರಮಂ ಮುಟ್ಟುಗುಂ
ಅಸಾಧ್ಯಮೆನೆ ದುಃಖ ಸೇತುವಿನೊಳೆ ಮುಳುಗದೆ
ಏಳಲಕ್ಕುಮೆ ಭವದ ವೈತರಣಿಯೊಳ್ ಒಡೆಯಾ!
ಜನ್ಮಯೋಗಮೊ ಮೇಣಾವ ದೈವ ಕೃಪೆಯೋ
ಕೆಲರ್ ಪುಟ್ಟಿನೊಳೆ ಪ್ರಾಜ್ಞರಿರ್ದು ಭವದೀಯಂ
ದಾಂಟಿ ನಿನ್ನ ನೆಲೆಯಂ ಕಾಂಬೊಂದು ಪುಣ್ಯಂ
ಪಡೆವುದು ಯುಗಯುಗಾಂತರಕೊಮ್ಮೆ ಎನುವೊಡೆಲ್ಲಿ
ಈ ಅದ್ಭುತ ಜೀವನವಾಹಿನಿಗೆ ಪರಮಪದ?
ಮುಂಬಂದೊಡೆ ಹಿಂದೆಳೆವುದೈ ಭವದೀಯ ಕಡು
ಕ್ರೂರ ಕರ್ಮ! ಇನ್ನೆಲ್ಲಿ ಮುಂದಿನ ಸಿರಿ ಹೆಜ್ಜೆ?
ಎಲ್ಲಿ, ಯಾವದಿಕ್ಕು ಪಿಡಿದೊಡಂ ಸರಿದಾರಿಯೆ

ಕಾಣಿಸದೆನೆ ಎಲ್ಲಿಯ ಜೀವನ್ಮುಕ್ತಿ ಹೇಳಾ
ಸಮಾಜ ಮೆನಿತು ಕೂರಮೊ ಬಿದಿಯೂ ಅಂತೆಯೇ
ಕೂರಮಲ್ತೆ ? ಇಂತಪ್ಪ ನಿಡುಗತ್ತರಿಯಲೆಂತು
ಸಾಮಾನ್ಯ ಜನಪದಕೆ ನಿಜ ಬಿಡುಗಡೆ ಒಡೆಯಾ ?
ಇಂತಿದರೊಳ್ ಹದಿನಾರನೇ ಶತಮಾನದಲಿ
ಜನ್ಮತಾಳ್ದ ಮೀರಾಬಾಯಿ ಎಂತು ತವಪದ
ಗುರಿಗೊಂಡು ಭವದೀಯ ಹಂಗುದೊರೆದು ಮನೆಯಂ
ಬಿಟ್ಟು ಪೊರವಂಟಳೊ ತಿಳಿಯದೈ! ಧೀರರ್ಗೆ
ಎಂಟೆರ್ದೆ ಎಂಬರ್ ! ಹದಿಹರೆಯದ ಮೀರಳಿಗೆ
ಪತ್ತೆರ್ದೆಯಿರ್ದುದೊ ? ಅಲ್ಲದೊಡೆ ತವಸುಖಾಶ್ರಯಮೊ ?
ಅವುದಿಂತು ಸುಶೀಲೆಯಂ ಕೈಪಿಡಿದು ನಡೆಸಿತ್ತೈ ?
ಆವಾವ ಗ್ರಹಂ ಅನುಕೂಲ ಸಿಂಧು ಪೇಳಯ್ಯ.
ತನ್ನಯ ಮನೋವಲ್ಲಭನಂ ಕಾಂಬ ಪುರ್ಚಿನೊಳ್
ದೇಶದಿಂ ದೇಶಕೆ ಎರೆಂಕೆ ಬಿದಿರ್ಚಿ ಹಾರುವ
ಹಕ್ಕಿಯೊಲ್ ನಡೆದಳಲ್ತೆ ಧೂರ್ತ ಸಮಾಜದ
ಹಂಗುದೊರೆದು ಜೀವನವ ಕಡೆಗಣಿಸಿ ಭಕ್ತಿರಸ
ಪಾನ ಮತ್ತತೆಯಲಿ ಜಗಮರೆತು ಶ್ರೀಕೃಷ್ಣನ
ಅರಸೀಅರಸಿ ಎಲ್ಲೂ ಕಾಣದಿರಲ್ ಏಕಾಂಗಿ
ಶ್ರೀರಮಣಿ ಎಂತು ಅಲೆದಾಡಿದಳೊ ಮಧುರೆಯಂ
ಮುಟ್ಟುವನಕ ! ಅಬಲೆಯ ಧೈರ್ಯಮೇ ಧೈರ್ಯಂ !
ಭಾರತ ಭುವಿಯ ಪುಣ್ಯತಲದಲಿ ಎನಿತು ಪರಮ
ಪುಣ್ಯಜೀವಿಗಳ್ ಸಂಜನಿಸಿ ಸಗ್ಗಕೆ ಸಂದು
ನರಜನುಮವಂ ಪುನೀತಗೊಳಿಸಿದರೋ ಅದಂ
ಬಣ್ಣಿಸಲೆಮ ಲೆಕ್ಕಣಿಕೆಯ ಶಕ್ತಿ ಸಾಲ್ಗುಮೇ ?
ಹಾ, ಎನಿತೆನಿತು ಪುಣ್ಯಜೀವಿಗಳ ನಾಡು ಈ
ಭಾರತವರ್ಷ ! ಕೆಸರಿನ ಕಮಲದವೊಲ್ ದಿವ್ಯಮಾ

ವರ ಕೀರ್ತಿ ಶಿಖರ!
ರಾಜಸ್ಥಾನದ ಘನವೆತ್ತ
ಜನನಾಯಕ ಜೋದಪುರ ನಗರಿಯ ನಿರ್ಮಾತ
ರಾವ್ ಜೋದಾಜಿ ವಂಶೀಯ ಶಿಶು ರನ್ನಮಣಿ
ಭಕ್ತ ಕವಯಿತ್ರಿ ಮೀರಾಬಾಯಿ ತಾಂ 'ಕಡುಕಿ'
ಎಂಬ ಗ್ರಾಮದಲಿ ರಾವ್ ರತ್ನ ಸಿಂಹನ ಪುಣ್ಯ
ಗೃಹದಲಿ ಸಂಜನಿಸಿದಳ್! ಜನ್ಮದಾತೆ ಶ್ರೀ
ಕುಸುಮ ಕುವರ್! ಟಾಂಕನಿಯ ರಜಪೂತ ಸ್ತ್ರೀ!
ಮೀರಾ ಬಲು ಮುದ್ದು ಮುಖದ ಮುದ್ದು ಮುದ್ದು ಮಗು!
ವಂಶಕೆ ಬೆಳಕಾಗಿ, ಪೆತ್ತೊಡಲಿಂಗೆ ಪ್ರಿಯವಾಗಿ
ಬೆಳೆಯುತಿರ್ದಳ್ ದಿನದಿನಂ ಕತ್ತುರಿ ಗಿಡದೊಲ್
ಸೊಂಪಾಗಿ! ಕಂಪಾಗಿ!
ಶಿಶು ಜೀವನಂ ಅಂದ
ಚೆಂದದಲಿ ತಾಯ್ತಂದೆಯರುಡಿಯಲಿ ನಲ್ಮೆಯಿಂ
ಕಳೆದುದು ಸುಲಭದಿ ಏರುಪೇರುಮಿಲ್ಲದೊಲು.
ಮೀರಾ ಮನೆಯಲಿ ತಿಪ್ಪ ತಿಪ್ಪ ಹೆಜ್ಜೆಯಿಡುತ
ಓಡಾಡುತಿರೆ ಎಳೆಯ ಮೈ ಅರೆಬಿರಿದ ಮೊಲ್ಲೆಯ
ಮೊಗ್ಗಿನೊಲ್ ಸುಮಧುರ ಸುಂದರ ಮೋಹಕಂ!
ಬಾಲೆ-ಮೀರಾಬಾಯಿದಿನನಿತ್ಯ ಆಟದಲಿ
ಊಟದಲಿ ನಿದ್ರೆಯಲಿ ಓರಗೆಯ ಮಕ್ಕಳಂ
ನಿಚ್ಚಂ ಬಯಸಿದಳಿಲ್ಲಂ; ತಾನೆ ತನ್ನೊಂದು
ಮಾಳ್ಕೆಯಲಿ ಆಡಿಪಾಡಿ ನಲಿದಾಡಿ ಸಮಯಂ
ಕಳೆಯುತಿರೆ ತಾಯಿ ಕುಸುಮಕುವರ್ ಮಗಳ ದಿವ್ಯ
ಭವಿಷ್ಯಂ ನೆನೆದಳಿಲ್ಲಂ, ಮನಃಕನಸಿನೊಳ್!
ಎಳೆ ಬಾಲೆ ನೀರುಂಡ ಮಂದಾರ ಗಿಡದವೊಲ್
ಹಾಲುಂಡು ಮೈದುಂಬಿದ ಮಾರ್ಜಾಲ ಮರಿಯೊಲ್

ಮುದ್ದಿನಿಂ ತಾಯ್ತಂದೆಯರುಡಿಯ ಕುವರಿಯಾಗೆ,
ಕಳೆದುದು ಸಮಯಂ ಬಾಲ್ಯಲೀಲೆಯ ಮೋದದಿಂ
ಅರೆಬಿರಿದ ಮೊಲ್ಲೆಮೊಗ್ಗಿನ ಸುಂದರ ಮಾಳ್ಕೆಯಲಿ!
ಕಳೆದುದು ಕೆಲಗಾಲಂ ಇಂತೆ ಸೊಗದ ಸುಧೆಯೊಳ್
ನತದೃಷ್ಟ ಮೀರಾ ವರುಷ ಹತ್ತು ಕಳೆವನ್ನ
ತಂದೆತಾಯಿಯರಂ ವಿಧಿಯ ಸಂಚಿನಿಂ ಕಳೆದು
ಕೊಂಡು ತಬ್ಬಲಿಯಾದಳ್ ! ಅಳುವೆನೆನೆ ಕಣ್ಣೀರ್
ಸುರಿಯದನಿತು ದಿಗ್ಭ್ರಾಂತಿ! ಯೋಚಿಸುವೆನೆ
ವಿಷಯ ನಿಚ್ಚಳಲ್ಲಂ! ಬಾಲೆ ದುಃಖಭಾರದಿ
ಮುಳುಗಿರಲ್, ನೊಂದು ನೀರಾದ ಕುಲ ಶ್ರೇಷ್ಠಮಹ
ತಾತ ರಾವ್‌ದೂದಾ ಕರೆದುಯ್ದು ಮೇಡತಾ
ಅರಮನೆಯೊಳ್‌ಲಾಲನೆಪಾಲನೆಯಲಿ ಬೆಳೆಸುತ
ವಿದ್ಯೆಯಂ ಕಲಿಸಿದಂ. ರಾವ್‌ದೂದಾ ಪರಮ
ವೈಷ್ಣವ ಭಕ್ತನಿರ್ದು ಸಾಧುಸಂತರ್ ಭಕ್ತ
ಜನರ್, ವಿದ್ವಜ್ಜನರ್ ಮುಂತಪ್ಪ ಮಾನ್ಯರಂ
ಏಗಳುಂ ಮಾನಿಸುತಿರೆ ಮೀರಾ ಹೃದಯದಿ
ಕೃಷ್ಣಭಕ್ತಿ ಇನಿದಿನಿತು ಘನಿಸಿದುದು ನಿಜದಿಂ
ಹಾಲು ಸಕ್ಕರೆಗಳ್ ಬೆರೆತು ಒಂದುಗೂಡಿದೊಲ್,
ವೈಷ್ಣವ ಭಕ್ತಜನಂ ಬಲು ಭಕ್ತಿಯಿಂ ತಾತಂಗೆ
ತಂದಿತ್ತ ಶ್ರೀಕೃಷ್ಣವಿಗ್ರಹಂ ಮೆಚ್ಚಾಗೆ
ಸಿರಿಭಕ್ತಿ-ಕೂಟ-ಬೇಟೆ-ಆಟಂ ಎಲ್ಲಮಂ
ಅದರೊಳೆ ನಡೆಸಿ ಪೂರೈಸುತಿರೆ ಏನುಮೇನು
ಪೆರ್ಚಳಂ ಕಾಣದಾಗೆ, ಇತರರ್ ಏಗಳುಂ
ಕಿಡಿಪಗತಿಮತಿಯಿರದಿರೆ ಸ್ವಚ್ಛಂದ ತಾನಾಯ್ತು!
ರಾವ್ ಜೋದಾಜಿ ವಂಶಾಬ್ಧಿಯ ಸುಧಾ ಸೂತಿ
ಧಗಧಗಿಸುವವೊಲ್ ಮತ್ತೆ ಮಾರಣ ಹೋಮಾಗ್ನಿ

ಪೊತ್ತಿದುದು ! ವಿಧಿಯೊಗೆದ ಪಾಶಕೆ ಸಿಲುಕಿ ರಾವ್
ದೂದಾ ಮರಣಿಸಿದಂ ! ಮನೆಯ ಹಿರಿಯತಲೆ ಉರುಳೆ
ಬಿರುಗಾಳಿಗೆ ಸಿಲ್ಕಿದ ಎಲೆಯೊಲ್ ತಲ್ಲಣಿಸಿದುದು
ಆಡಳಿತ ಚಕ್ರ ಚರಣಂ ! ಮೀರಾ ಬಾಯಿಯುಂ
ತನ್ನತಾನರಿಯದವೊಲ್ ಶ್ರೀಕೃಷ್ಣ ಭಕ್ತಿಯೊಳ್
ಮುಳುಗಿ ಜೀವಪುಷ್ಪಮಂ ಸಮರ್ಪಿಸಿಕೊಂಡಳ್ !
ಭಕ್ತಿಭಾವದಾಝುರಿ ವಿದ್ಯುತ್‌ಲಹರಿಯ ತೆರಂ
ದಮನಿದಮುನಿಗಳಲ್ಲಿ ಪರಿದುದು ಕೆನ್ನತ್ತರ್
ಘನಿಸುವೊಲ್ !
ಶ್ರೀಕೃಷ್ಣದೇಗುಲದಿ ದಿನದಿನಂ
ಸಾಧು ಸಂತರ್ ಕೂಡಿ ಶ್ರೀಕೃಷ್ಣ ಕಥಾನಕ
ಮೇಣ್ ಭಗವದ್ಗೀತೆಯಂ ಪಾಡಿ ಚರ್ಚಿಸುವ
ಪಂಡಿತಮತಿ ವಾಗ್ಜಾನ್ಹವಿಯಲಿ ಮುಳುಗೇಳುತ
ಮನಃಪ್ರಾಣಗಳಿಂಗೆ ತುಷ್ಟಿಯಂ ಪುಷ್ಟಿಯಂ
ತುಂಬಿ ಶ್ರೀಕೃಷ್ಣಪಾರಾವಾರದಲಿ ಮುಳುಗಿ
ತೇಲಿದಳ್ ಮುದ್ದು ಮೀರಾ ! ತನ್ನ ಪ್ರಿಯತಮ
ಶ್ರೀಕೃಷ್ಣನಿಗಾಗಿ ಎಡೆಬಿಡದೆ ಅರಸುವ ಮನ
ಆರಾಧಿಸುವ ಹೃದಯಗಳ ಗೀಳು ಏಗಳುಂ
ಮುಂಬೆಳೆಯುತಿರ್ದುದು ಜಲಮುಂಡ ಎಳೆಸಸಿಯೊಲ್ !
ಪಕ್ಷಿಕೂಜನದಲಿ, ಜಲಧಿಯ ಜುಳುಜುಳುರಾಗ
ಮಾಲೆಯಲಿ, ತಂಗಾಳಿಯ ಮರ್ಮರ ಲೀಲೆಯಲಿ,
ಎಲ್ಲಿ, ಯಾವೆಡೆಯೊಳ್ ಕಿವಿಗೊಟ್ಟೊಡಂ ಶ್ರೀಕೃಷ್ಣ
ಸಾರಮಲ್ಲದೇನಿಲ್ಲಂ ! ಲೋಕಮೆಲ್ಲವನಾ
ಗೋವರ್ಧನಗಿರಿ ! ಮಥುರಾ ನಗರಿಯೇ ಇಳಾ
ಸ್ವರ್ಗ ! ತಾನವನ ದಾಸಿಯೇ ಹೊರತು ಬೇರಲ್ಲ,
ಎಂದೆಂಬ ದೃಢ ಭಕ್ತಿ ಎದೆಯಂತರಾಳದಿ

ತುಂಬುತಿರೆ ತಾತರಾವ್ ದೂದ ಕಾಲನದಿ
ಯಲಿ ತೇಲಿ ಹೋದುದಂ ಮರೆತಳ್ ಮೀರಾಬಾಯಿ !
ವಂಶೀಯ ಜೇಷ್ಠಪುತ್ರಂ ರಾಜ್ಯಸಿಂಹಾಸನ
ವೇರ್ದು ಹದಿಹರೆಯದ ಮೀರಾ ಬಾಲೆಗೆ ಕಲ್ಯಾಣ
ಗೈವೊಂದು ಸದಿಚ್ಛೆಯೊಳ್ ನೆರೆರಾಜ್ಯದ ರಾಜ
ವೀರಮದೇವಸುತ ಭೋಜರಾಜನೊಡಂ ಲಗ್ನ
ನಿಶ್ಚಯಿಸಿ ಕಲ್ಯಾಣಂ ನೆರೆವೇರಿಸಿ ಕಳಿಪಿದಂ !
ಲಗ್ನ ಒಲ್ಲೆನೆನಲುಂಟೆ ? ಪೆಣ್ ಎಂದಿಗೂ ಪೆಣ್
ಎನಲ್ಕೆಲ್ಲಿಯ ಒಲ್ಲೆನೆಂಬ ಸೊಲ್ಲು ? ಮೀರಾ
ನಡೆದಳ್ ಪತಿಗೃಹಕೆ ಕಂಬನಿಯ ಕೋಡಿಯಂ
ಹರಿಸುತ. ಪತಿಗೃಹಕ್ಕಯ್ಯೆ ಪೆಣ್ ಕಣ್ಣೀರ್
ಕರೆವುದು ಸಮಂಜಸಮಿರುತಿರೆ ಆರೂ ಅದಂ
ಮಾನಿಸದೆ ಏನೊಂದಂ ಪೇಳದಿರ್ದರ್, ತಮ್ಮ
ತಮ್ಮ ಮನಸಮಾಧಾನದಿಂದಲಿ
ಆದೊಡಾ
ಭಕ್ತೆ ಮೀರಾಬಾಯಿಯ ಆತ್ಮಸಂಕಟಮಂ
ಆ ಕೃಷ್ಣ ಪರಮಾತ್ಮ ಮಾತ್ರಮೆ ತಿಳಿದಿರ್ದಂ !
ಮಾರವಾಡದ ಪುತ್ರಿ ಮೀರಾ ಗೃಹಿಣಿಯಾಗಿ
ಮೇವಾಡಕ್ಕೈದಳ್ ! ಆದೊಡೇಂ ಜೀವನ ಸುಖಮಂ
ಭವಿಪ ಯೋಗಮಿರಲಿಲ್ಲಂ ; ಒಡಲ ತಳಮಳಂ
ಎದೆಯ ಕಳವಳಂ ಮಿತಿಮೀರುತಿರೆ ಶ್ರೀರಮಣಿ
ಕೃಷ್ಣ ಪಾದಾರಮಲ್ಲದೇನಂ ಒಲ್ಲೆನಾಂ
ಎಂದೆಂದು ವ್ರತದೊಳ್ ನಿಂದು ಪಗಲಿರುಳ್ ಶ್ರೀ
ಕೃಷ್ಣನಾ ಧ್ಯಾನದೊಳ್ ಮುಳುಂಗಿ ಭಜಿಸಿ ಭಜಿಸಿ
ಭಜನಾವಳಿಯಂ ಗೀತಿಸಿ, ಭಕ್ತಿಯಿಂ ಪಾಡಿ
ಧ್ಯಾನದಲಿ ಮುಳುಗಿ ತನ್ನ ಮನೋವಲ್ಲಭನೊಲೆ

ಭಾವಿಸಿ ನುತಿಸಿ ಪೂಜಿಸಿ ಪಾಡಿ ಪೊಗಳಿ ಭಕ್ತಿ
ಸಮುಜ್ಜಲತೆಯಿಂದಲಿ ಜಗಮರೆತು ಮೈಮರೆತು
ಪರಮ ಯೋಗಿನಿಯಾಗಿ ದೇಗುಲದಿ ಶ್ರೀಕೃಷ್ಣ
ಪಾದದ್ವಯಮಂ ತಬ್ಬಿ ಕಂಬಿನಿಯಿಂ ತೊಳೆದಳ್ !
ಅದೊಡೇಂ ಸಾಮಾಜಿಕ ಪ್ರಜ್ಞೆ ಸಹಿಪುದೆ ಈ
ತೆರನ ಪೂಜೆಪುರಸ್ಕಾರಗಳ ಸುದತಿ ತಾಂ
ನಿರ್ವಹಿಸುವುದಂ ? ಸ್ತ್ರೀಗೇಗಳುಂ ಮನೆಯಲ್ತೆ
ವಾಸಯೋಗ್ಯಸ್ಥಳಂ ? ಪೂಜಾರಿಗಳಿರಲ್ಕೆ
ಇವಳದೇಂ ಪಾತ್ರಂ ಸಿರಿಕೃಷ್ಣನ ದೇಗುಲದಿ ?
ಎಂಬ ಪ್ರಶ್ನೆ ಜನಮನದಲಿರೆ ಬೆಳೆದುದೆತ್ತಲ್
ಮುಳ್ಳುಕಂಟಿಯಬೇಲಿ ಪೊರಗುಯ್ಯಲ್ ಅಡ್ಡಿಯ
ಮೇಲಡ್ಡಿ ! ದೂಷಣೆ-ತಿರಸ್ಕಾರಂಗಳ್ ತಿವಿದು
ತಿವಿದು ಮೂಲೆಗೊಳಿಸುತಿರೆ ಕಂಬನಿಕೋಡಿ ಎಳೆ
ನುಣ್ಗದಪುಗಳಂ ತೊಯ್ಸಿದುದು ಮಳೆ ಸುರಿದವೊಲ್ !
ಆದೊಡೇಂ ವಿಧಿಲಿಖಿತಮಿರ್ದುದೇ ಬೇರೆ. ಆ
ದೇವನಾಣತಿಯಿಲ್ಲದೆ ನಡೆವುದೆ ಜೀವನೀ
ಯೋಗಾಯೋಗಂ ? ಆವ ಗ್ರಹಗಳ ಚೋದನೆಯೊ
ಪತಿ ಭೋಜರಾಜ ಮರಣಿಸಿ ವೈಧವ್ಯ ಪ್ರಾಪ್ತಿ
ಘುತ್ತೆಂದು ಒದವಿಬರೆ ಬಲ ಮೈದುನಂ ರಾಜ್ಯ
ಪಟ್ಟವೇರಿದಂ ! ಪತಿಗೃಹದೊಳಿರ್ದ ಮೀರಾ
ಬಾಯಿ ನರಳಿ ನೊಂದು ನಲುಗಿ ನೋಯುತ ಕಂಬನಿ
ಮಿಡಿದೊಡಂ ಶ್ರೀಕೃಷ್ಣ ಪಾದಗಳ ಸೇವೆಯಂ
ಬಿಡದೆ ಭಜನಗೇಯುವಂ ಹಾಡುತ ಧ್ಯಾನಿಸುತ
ದಿನಗಳೆಯುತಿರೆ ಅತ್ತೆ-ಮೈದುನರು ಕಿನಿಸಿನಿಂ
ಮುನಿಸಿನಿಂ ರಾಜಮನೆತನದ ಮರ್ಯಾದೆ ಕಳೆದು
ಲೋಕಲಜ್ಜೆಯಂ ಮರೆತು ಬಾಳ್ವುದು ತಪ್ಪೆಂದು

ದೂಷಿಸಿದರ್, ಸಿಟ್ಟಿನ ಅಗ್ಗಿಯಂ ಕಾರಿದರ್ !
ಪರಮಸಾಧ್ವಿ ಮೀರಾ ಭಗಿನಿ ಗಮನಿಸದದಂ
ಕೃಷ್ಣಭಕ್ತಿಯಲಿ ತೀವ್ರಮುಳುಗಿದಳ್ ಮುನ್ನಿನೊಲ್
ಶ್ರೀಕೃಷ್ಣ ವಿಗ್ರಹದ ಪಾದಗಳ ಬಿಗಿದಪ್ಪಿ
ಕಂಬನಿಸುರಿಸುತಲಿರೆ ತಾಳಲಾಗದೆ ಬೈದು
ಥೂತ್ಕರಿಸಿ ಹೀನಾಯಗೈದರ್ ! ಹಾ, ಆರಾರ್
ಏಂಗೈದೊಡಂ ಆ ನಿರ್ಮಲ ಹೃದಯಿ, ಅದ್ಭುತ
ಸಹನಶೀಲೆಗೆಲ್ಲಿಯ ಇಹದುಃಖ ? ಸಂಕಷ್ಟ ?
ಶ್ರೀಕೃಷ್ಣಮೂರ್ತಿಯ ಪದತಲದಲಿ ಮಂಡಿಯೂರಿ
ತಲೆಮಣಿದು ಕೈದೋಳುಗಳ ಮಾಲೆಯಿಕ್ಕಿ ಬಿಗಿ
ವಿಡಿದು ಆಶ್ರಯಂ ಬೇಡಿದಳ್ ದುಷ್ಟತ್ರಾಸಿತ
ವರಲಕ್ಷ್ಮಿಯೊಲ್ ! ದೇಗುಲದ ತುಂಬೆಲ್ಲಾ ಪರಮ
ಭಕ್ತರಾದ ಸ್ತ್ರೀಪುರುಷರ ಭಜನಗೇಯ ಮಂಡಳಿ
ಕೈತಟ್ಟುತ ಪಾಡುತಿರೆ ಗೇಯ ರಾಗರವ
ಮೇಣ್ ಶ್ರುತಿಗೂಡುವ ಗೆಜ್ಜೆಗಳ ಜಿಣ್‌ಜಿಣ್
ಮಧುರಾತಿಮಧುರ ನಾದಾವಳಿಯು ಒಗ್ಗೂಡಿ
ಗಗನವೇರುತಿರ್ದುದು ಓಂಕಾರ ರೂಪದಲಿ !
ಮೀರಾ ಸಿರಿಕೃಷ್ಣನ ಪಾದದೊಳ್ ತನ್ನಾತ್ಮ
ನಿವೇದನೆಗೈದಳ್ ಹೇ, ಪರಮಾತ್ಮ ಸಂಸಾರ
ನರಕವೆತ್ತ ? ಈ ಪರಮ ಭಕ್ತಿಯ ಬಾಳೆತ್ತ ?
ಎರಡಕ್ಕೂ ದಕ್ಷಿಣ ಧ್ರುವ ಉತ್ತರಧ್ರುವಗಳ
ಅಂತರವಿರೆ ಏಕಾಗಿ ಈ ನಗ್ನ ಕಠೋರ
ಸಂಸಾರವೆನ್ನ ಅರಿತರಿತು ಹಿಂದೆಳೆವುದೊ
ಎಂತಿದರ ಬಿಡುಗಡೆಯೊ ಈ ಪರಿಯ ಪರಿತಾಪ
ತಾಳೆನೈ ಬಾಳೆನೈ ಹೇ ಎನ್ನ ಪ್ರಿಯತಮ !
ಕರುಣದಿಂ ದಯೆತೋರ್ದು ಸಾಕುಮಾಡೈ ಈ ಭವ

ಬಂಧನವ ಬೇಡಿಕೊಂಬೆ ಹೇ ಮೀರಾ ಪ್ರಭು !''
ಎಂದೆನುತ ಕೈ ಪರೆಗುಟ್ಟಿ ಕುಣಿವಳ್ ಮೈಮರೆತು
ಮನೆತನದ ಲೋಕಲಜ್ಜೆಯಂ ಮೀರುವವೋಲ್ !
ಭಜನ ಮಂಡಳಿ ಇನ್ನಿನಿತು ಹುಮ್ಮಿನಿಂ ಪಾಡಿ
ಝಿಲ್ ಝಿಲ್ ಎನೆ ಕುಣಿವುದು ಭಕ್ತಿ ಭಾವಂ ಉಕ್ಕಿ
ತಾಳಲಯದಿಂ ಗೆಜ್ಜೆಗಾಲ್ಗಳಂ ಕುಟ್ಟಿಕುಟ್ಟಿ !
ಮೀರಾ ತಲೆಮಣಿದು ಕಣ್‌ಮುಗಿದು ಭಜನಗೈದು
ಅಂತರಂಗಿಕ ಆತ್ಮ ನಿವೇದನೆ ಮಾಡಿದಳ್,
ಪ್ರಿಯತಮನೆ ! ನೀನು ಮುರಿದರೂ ನಾನು ಸ್ನೇಹವನ್ನು
ಮುರಿಯಲಾರೆ ! ನಿನ್ನ ಸ್ನೇಹವನ್ನು ಬಿಟ್ಟು ನಾನು ಯಾರ
ಯಾರ ಸಂಗಡ ಜೋಡಿಸಲಿ ॥
ನೀನು ತರುವನವಾದರೆ ನಾನು ಪಕ್ಷಿಯಾದೆ ।
ನೀನು ಸರಸ್ಸಾದರೆ ನಾನು ಅದರ ಒಳಗಿನ ಮೀನಾದೆ ॥
ನೀನು ಗಿರಿವರನಾದರೆ ನಾನು ಅದರ ಮೇಲಿನ ಮಯೂರವಾದೆ ।
ನೀನು ಚಂದ್ರನಾದರೆ ನಾನು ಚಕೋರವಾದೆ ॥
ಪ್ರಭೋ ! ನೀನು ಮುತ್ತಾದರೆ ನಾನು ದಾರವಾದೆ ।
ನೀನು ಸುವರ್ಣವಾದರೆ ನಾನು ಬಿಳಗಾರವಾದೆ ॥
ಮೀರೆಯ ಪ್ರಭುವಾದ ಬ್ರಜವಾಸಿಯಾದ ಕೃಷ್ಣನೆ ।
ನೀನು ನನ್ನ ಪ್ರಭು, ನಾನು ನಿನ್ನ ದಾಸಿ ॥''
ಝಿಲ್ ಝಿಲ್ ಝಿಲ್ ಝಿಲ್ ಝಣಕು ರವದೊಂದಿಗೆ
ಭಜನಗೇಯ ರಾಗರಸ ತುಂಬಿತು ದೇಗುಲದಿ !
ಲೋಕಮರ್ಯಾದೆಗಂಜಿದ ರಾಣ ಅವಳ ಪೂಜೆ
ಗೊಯ್ವ ಗಂಧ ಸಾಮಗ್ರಿಯ ಕರಂಡದೊಳ್ ವಿಷ
ಸರ್ಪವಂ ಇಡಿಸಿ ಕಳಿಪಿದಂ ! ಮೀರಾ ಅದರ
ಮುಚ್ಚಳಂ ತೆರೆದೊಡನೆ ಸರ್ಪ ತಲೆಯೆತ್ತಿ ತಾಂ
ಪುಂಗೀನಾದಂ ಕೇಳ್ದವೊಲ್ ಹಡೆಯಾಡಿಸಿತು

ಆನಂದ ಸುಧಾರಸನೆಯಂ ಮನದಲಿ ತುಂಬಿ
ತುಳುಕುವಂದದಿ ! ಅದಂ ಕಂಡ ಮೀರಾಬಾಯಿ
ಕೈಮುಗಿದು ಕ್ಷೀರಮಂ ಮುಂದಿಟ್ಟಳ್ ! ಸರ್ಪಂ
ಕ್ಷೀರಮಂ ಪೀರ್ದು ನಸುವೊಳ್ಳುತ್ತ ತಲೆತೂಗಾಡಿ
ಅಲ್ಲಲ್ಲೆ ಸುಳಿದಾಡಿ ಶ್ರೀಕೃಷ್ಣ ಪಾದದಲಿ
ಹಣೆಹೊತ್ತಿ ಕಣ್ಮಾಯಮಾದುದು ಭಜನಮಂಡಳಿ
ನೋನೋಡುತಿರೆ ಆಶ್ಚರ್ಯ ವಿಸ್ಮಿತನಯನಗಳಿಂ !

ಶ್ರೀವನಿತೆ ವಿಚಲಿತಳಾಗದಿನಿತು ಕಣ್ಮುಗಿದು
ಕುಣಿಯುತ ಗಿರಿಧಾರಿಯ ಭಜನೆಯಂ ಮಾಡಿದಳ್ !
"ಶ್ಯಾಮಸುಂದರನೆ ನನ್ನನ್ನು ನಿನ್ನ ದಾಸಿಯನ್ನಾಗಿ ಇಟ್ಟುಕೊ ।
ಗಿರಿಧಾರಿಯೆ, ನನ್ನನು ನಿನ್ನ ಆಳಾಗಿ ಇಟ್ಟುಕೊ ॥
ನಿನ್ನ ದಾಸಿಯಾಗಿ, ತೋಟದಲಿ ಕೆಲಸ ಮಾಡುತ್ತಾ ।
ಪ್ರತಿದಿನವೂ ಎದ್ದು ನಿನ್ನ ದರ್ಶನ ಮಾಡುವೆನು ॥"

ಆ ಭಕ್ತಿಭಾವ ಸ್ಫುರಿಪ ರಾಗರಸಧಾರೆಯು
ಹರಿಯುತಿರೆ ಶ್ರೀಕೃಷ್ಣ ನಿಜರೂಪದಿ ಬಂದಪನೊ
ಎಂದು ಬೆಮೆಗೊಳ್ವನಿತು ಸುಂದರ ಭಜನ ಧಾರೆ !
ರಾಜಮನೆತನದ ವಿಧವೆ ಎಳೆಹೆಣ್ಣು ಸುಂದರಿ
ಲೋಕಲಜ್ಜೆಗೇಡಂ ಗಣಿಸದಿರುವುದುಸರಿಯೆ
ಎಂದುಮೆಂದು ರಾವ್ ವಿಕ್ರಮಾದಿತ್ಯ ಕಿಡಿಕಿಡಿ
ವೋಗಿ ಘೋರವಿಷಮಂ ಕುಡಿಸೆ ಅಜ್ಞಾಪಿಸಲ್
ದಾಸಿ ಕಡು ದುಃಖದಿಂ ವಿಷದ ಬಸಿಯಂ ಕೃಷ್ಣ
ದೇಗುಲಕೆ ಕೊಂಡೊಯ್ದು ಅಳುತಳುತ ಮಂದಿಟ್ಟಳ್ !

ಅದನೋಡಿ ಬೆದರಿದಳೆ ? ಪಿಂಜರಿದಳೆ ? ಕಂಬನಿ
ಕರೆದುಗೋಳಾಡಿದಳೆ ? ಇಲ್ಲಂ, ಇಲ್ಲವೆ ಇಲ್ಲಂ !
ಇನಿತು ಕಿನಿಸುಮುನಿಸಿಲ್ಲಿದೆ ವಿಷದ ಬಟ್ಟಲಂ
ತಂದ ಸಖಿಯಂ ನಲ್ಮೆಯಿಂ ಸಂತವಿಸಿ ಘೋರ

ವಿಷಮಂ ಮನೋವಲ್ಲಭಂಗೆ ಅರ್ಪಿಸುವೋಲ್
ಶ್ರೀಕೃಷ್ಣ ಸನ್ನಿಧಿಯೊಳ್ ಭಕ್ತಿಪೂರ್ಣಮನದಿಂ
ಪರಮಾನ್ನ ದೊಲ್ ಪೀರಿ ಶ್ರೀಕೃಷ್ಣಪಾದದಲಿ
ತಪಶ್ಚರ್ಯಮಾಂತಿರೆ ಭಕ್ತರ್ ಬೆಕ್ಕಸ ಬೆರಗು-
ವಟ್ಟೊಡಂ ಹೋ! ಎಂದಳಲ್ದೊಡಂ ಕುಟುಂಬಿಗರ್
ಮಾನಿಸದೆ ಒಡಲ್ಗಿಚ್ಚು ಕುದಿಕುದಿದು ಸಾಸಿರ
ನಾಲಿಗೆಗಳ್ ಕಟ್ಟುರದ ನಿಟ್ಟುರದ ವಾಗ್ಬಾಣ
ಒಗೆಯುತಿರಲದುಂ ಕರ್ಣಾಕರ್ಣಿಯೈಸಿ ಕಿವಿ
ಗಹ್ವರಮಂ ಕೋರೈಸುತಿರೆ, ಮಣಿಯದ ತಪಸ್ವಿನಿ
ಭಗವಂತನೆನ್ನ ಮನೋವಲ್ಲಭನಿರೆ ಆ ಕಟು-
ವಾತುಗಳಿಗೆ ನಾನೇಕೆ ಮಣಿಯಲಿ ಎಂದೆಂದು
ಎದೆಯಂ ಸೆಟೆದು ನಿಲ್ವ ದಿಟ್ಟೆಯೊಲ್, ಆ ಸುದತಿ
ಶ್ರೀ ಕೃಷ್ಣ ಜನ್ಮಸ್ಥಲ ಮಥುರೆ ಮೇಣ್ ಗೋಕುಲ
ಬೃಂದಾವನಗಳಂ ಕಣ್ತುಂಬ ಕಂಡು ಅಲ್ಲಿಯೆ
ಜೀವ ಬಿಡುವೊಂದು ಪಿರಿಯಾಸೆಯಿಂ ಭಕ್ತಜನ
ಮಂಡಳಿಯೊಡಂ ತಾಂ ಪೊರವವಂಟಳ್ ಮಥುರಾ
ಭಿಮುಖಿವಾಗಿ, ಸೂಜಿಗಲ್ಲಿನೊಲ್ ಸೆಳೆದಿರೆ ಮನಂ
ಶ್ರೀಕೃಷ್ಣ ಅಮೃತರಸಾಯನಂ! ಆಃ! ಏಂ ಸವಿ?
ಏಂ ರುಚಿರ? ಏಂ ಮಧುರಮಾ ಭಜನಗೇಯಗಳ್
ಕವಯಿತ್ರಿ ತಾಳವಿಕ್ಕಿ ಪಾಡುತ ನಸುಮುಂದಿರೆ,
ಬಹುಮಂದಿ ಸ್ತ್ರೀಪುರುಷವರ್ಗ ಹಿಂದೆ ಹಿಂದೆಯೇ
ಹಿಂಬಾಲಿಸುತಿರೆ ಅಹ, ಏಂ ಸೊಗಂ? ಕರತಾಳ
ಮೇಣ್ ಗೆಜ್ಜೆಗಳ ಮೃದು ಮಧುರ ರವಂಗೂಡಿ
ಭಜನಗೇಯದಾ ಮಧುರಾತಿಮಧುರ ಭಾವಂ
ತಂಗಾಳಿಯಲೆಪದೊಳ್ ಮೇಲೇರ್ದು ನೋಂಪಿಯಿಂ
ಭಕ್ತಿಯಿಂ ಸಗ್ಗಮನಡರುತಿರಲ್ ಪೇಳಲೇಂ

ಸದ್ಭಾವ ಕೂಜನಾತಿರೇಕಂ! ಭೂಸುಧೆಯ
ಮಾಧವೀ ಪುಷ್ಪಕೋಟಿ ಸುಗಂಧಮಾಧುರ್ಯಂ
ತಂತಾನೆ ಲೋಕಾಭಿರಾಮವಾಗಿ ಪಸರಿಪ
ಮಾಳ್ಕೆಯೊಲ್ !
ಶ್ರೀವನಿತೆ ಭಕ್ತಿರಸವುಕ್ಕುಕ್ಕಿ
ದ್ರವಿಸಿ ಹರಿಯುತಿರಲ್ ನೀರಾಗಿ ಜಗಮರೆತು
ಭಾವನೋತ್ಕಂಠೆಯಿರೆ ಪಾಡುತ ನಡೆದಳ್ ಗರಿ
ತಳೆದ ಚಿಣ್ಣ ಹಕ್ಕಿಮರಿಯೊಲ್!
ಹಾ! ಏನೆಂಬೆ
ಅವಳಸಂತಸಮಂ? ಮಥುರಾಪುರನಾಥನಂ
ಸಂದರ್ಶನಗೈದು ತಲೆ ಮಣಿಯೆ ಭಕ್ತಿಭಾವನೆ
ಉಕ್ಕಿಹರಿದುದು ಉದಯ ರವಿಯ ಪ್ರಭಾತದೊಲ್!
ಪಯಣದ ದಣಿವು ಎಲ್ಲಿ ಪಾರ್ದುದೊ ಒಡಲ ಪಸಿವೆ
ಎಂತು ಅಡಗಿದುದೊ ತನ್ನ ಪ್ರಿಯಕರನ
ದಿವ್ಯ ಮೂರ್ತಿಯಂ ಕಂಡೊಡನೆ ಮುಗುದೆಯ ಮನ ನಲಿದು
ಹಿಗ್ಗುವವೊಲಾಯ್ತು ಹೃದಯದ ಸಂತೃಪ್ತಿರಸ
ದುಬ್ಬರಂ ಏರುತಿರೆ ಚಣ ಚಣಂ, ಏಂ ರಸನೆ?
ಏಂ ತಣ್ಪು? ಏಂ ಮಧುರಮಾ ಶ್ರೀ ಕೃಷ್ಣಾಮೃತಂ!
ಬಿಡದೆ ಪಾದಪದ್ಮಗಳಂ ಬಿಗಿದಪ್ಪಿ ಮಣಿದು
ಕಂಗಳಲಿ ನಿಡುಮುತ್ತಿನ ಮಾಳ್ಕೆಯೊಲ್ ಕಂಬನಿ
ಸುರಿಸಿ ತೊಳೆದಳ್ ಪಾದದ್ವಯಗಳಂ ಆನಂದ
ಸುಧಾಸೂತಿಯಲಿ ಮಿಂದು ಪುನೀತಳಾದವೊಲ್!
ಪದತಲದಿ ಮಂಡಿಯೂರಿ ಕುಳಿತಿರ್ದು ಕಣ್ಮುಗಿದು
ಕೈಮುಗಿದು ಧ್ಯಾನದೊಳ್ ಮುಳುಂಗೆ ಜಗ ಜಂಜಡ
ಮೆಲ್ಲಮಂ ಮರೆತು ಮನೋವಲ್ಲಭನ ಧ್ಯಾನದಲಿ
ಮನಂ ಘನಿಸಿ, ಧ್ಯಾನಂ ಘನಿಸಿ ಮೈಮರೆತಿರೆಯಿರೆ

ಶರದಭ್ರ ತಲದಿಂ ಜಿಗಿದು ಧರೆಗೈ ತಂದಿಹ
ಪಾರ್ವತಿಯೊ ಎನಲ್ಕೆ ಘನಂ! ತಪಸ್ವಿನಿ ತಪಂ!
ಇಂತು ಮಥರಾನಾಥನ ಸನ್ನಿಧಿಯಲಿ ಕಳೆಯೆ
ಕೆಲದಿನಂ ಆ ಸಾಧ್ವಿಯ ಮನದಿ ಶ್ರೀ ಕೃಷ್ಣ
ಬಾಲ್ಯಲೀಲೆಯಾಡಿದ ಪುಣ್ಯತಲಮಂ ಕಂಡು
ಕಣ್ತುಂಬ ಹೃನ್ಮನಕೆ ರಸದೌತಣಮೀವೊಂದು
ಪಂಬಲಂ ಮೂಡಲಾ ನಿತ್ಯ ತಪಸ್ವಿನಿ ತನ್ನ
ಭಜನ ಮಂಡಳಿಯೊಡಂ ಸಾರಿದಳ್ ವನಶ್ರೇಣಿಯ
ಮೃಗ ಚರಣರೇಖಾ ಪಥವಿಡಿದು! ಹಾ! ಎನಿತು
ಪಚ್ಚ ಪಸುರೊಸರ್ವ ವಿಪಿನ ಶ್ರೇಣಿ. ಹೂಬಳ್ಳಿ
ಗಿಡುಮರಗಳ್ ದಾಂಗುಡಿ ನೀಳ್ದು ಕೈಯಾಡಿದುವು
ನುಣ್ಗದಪಿನೊಳ್. ಅಲರ್ವಕ್ಕಿಗಳ್ ಅರೆಯರಳ್ದ
ಪೊಮೊಗ್ಗುಗಳೊಳಗೊಳಗೆ ನುರ್ಗಿ ಮಧುವಂ ಪೀರ್ದು
ಝೇಂಕರಿಸಿದುದು ಮುದದಿ ಓಂಕರಿಪ ಮಾಳ್ಕೆಯಲಿ.
ವಿಹಂಗಮ ಸಂಕುಲಂ ಚೀಂಕರಿಸೆ ಒಗ್ಗೂಡಿ
ಜಯಧ್ವನಿಗೈವವೊಲ್! ಎಳೆ ಹಸಿರು ಸೂಸುತಿಹ
ವನದೇಶದಲಿ ಹೊಂದಳಿರ್ ಬೆಳ್ದಳಿರ್ ಮೇಣ್
ಕೆಂದಳಿರ್ ಮುಂತಪ್ಪ ವಿವಿಧ ರಂಗುರಂಗಿನ
ಸಿಂಗರಂ ಮೇಣ್ ಪೂಗಳಲಂಕರಣಂ ಮನ
ಸೆಳೆಯುವನಿತು ಸುರಲೋಕದ ಸುಸಂಪದಮೆನಲ್
ಕಾಣದೊ, ದಿನನಿಚ್ಚಂ ಗಿಡುಮರಗಳಿಂದುದುರ್ದ
ವರ್ಣವರ್ಣದ ಕುಸುಮ ದಳಗಳ್, ಕುಸುಮರೇಣು
ಮತ್ತಮಾ ಹಣ್ಣೆಲೆಗಳ್ ಹರಡಿರೆ ವರ್ಣಮಯ
ರಂಗೋಲಿಯಂ ಚಿತ್ರಿಸಿರ್ದೊಲ್ ರಂಜಿತಮಾ
ಪುಣ್ಯಭೂಮಿ. ತೆಂಕಣದೆಲರ್ ಸುಯ್ದುಯ್ದು ಬರೆ
ನಾನಾ ಎಡೆಯಿಂ ತರಬಿತರ್ಪ ಸುಗಂಧಯುತ

ತಣ್ಣನೆಯ ಕಂಪುಗುವ ತಣ್ಬು ನಲವಿಂ ಮುದ್ದು
ಮೊಗಮುಟ್ಟಿ ಮುದ್ದಿಸುವೊಲ್ ತೋರ್ವ ಸ್ಪರ್ಶಸುಖಂ !
ನೀಲನೀಲಿಯ ನೀರವ ನಭೋಗಣದಿ ನಿಖಿಲ
ಪಯೋನಿಧಿಗಳ್ ಚಿತ್ರಿಸಿರ್ದವರ ಚಿತ್ರಣಂ ;
ಸುಂದರ ಮಯೂರಗಳ ಸಂಘದ ಆನಂದ
ಪೂತ ನೃತ್ಯದೈಶ್ವರ್ಯದ ಮಂಗಳ ವಿಶೇಷಂ ;
ಮೇಣ್ ನಸು ಮುಂದೆ ಮೊರೆದು ನೊರೆಗರೆದು ಶಿಲೆಯಿಂ
ಶಿಲೆಗೆ ಪಾಯ್ದುಮಿರುಮಿರುಗಿ ಚಿಮ್ಮುತ ಹರಿಯುತಿಹ
ವರ ನದಿಯ ಸರಸ ಸಲಿಲ ಲೀಲಾವೇಶ ನಿಧಿ !
ಇಂತಪ್ಪ ನಿಸರ್ಗದೈಸಿರಿಯ ಮನಮೋಹಕ
ಸಾಮ್ರಾಜ್ಯದಲಿ ಎಲ್ಲಿಯ ಬಳಲಿಕೆ ಪಾಂಥರ್ಗೆ ?
ದಾರಿ ಸಾಗಿದುದು ಸೊಗದಿಂ ಗೋಕುಲಕೆ. ಮೀರಾ
ತನ್ನಯ ಮನೋವಲ್ಲಭನ ದೇಗುಲದಿ ಹಾಡಿ
ಪಾಡಿ ನಲಿದಾಡಿ ಧ್ಯಾನಿಸಿ ತವಿಸಿ ಮನದಣಿಯೆ
ತನುದಣಿಯೆ ಪೂಜಿಸಿದಳ್
ಅಲ್ಲಿ ಕೆಲದಿನಮಿರ್ದು
ಶ್ರೀಕೃಷ್ಣಲೀಲೆಯಾಡಿದ ತಾಣತಾಣಮಂ
ಸಂದರ್ಶಿಸಿ ಕಾಳಿಂದಿ ಮಡುವಿನಲಿ ಮಿಂದು ಮಡಿ
ಉಟ್ಟು ಬೃಂದಾವನದ ತಣ್ಣೆಳಲಲಿ ನಲಿದಾಡಿ
ಅಲೆದಾಡಿ ವಿಶ್ರಮಿಸಿ ಹಣ್ಣು ಹಂಪಲಮುಂಡು
ಮುದಗೊಂಡು ದ್ವಾರಕಾ ನಗರದ ಪಥವಿಡಿಯಲಾ
ವೀಥಿವೀಥಿಯೊಳ್ ಜನಜಂಗುಳಿಯಂ ಬೆಕ್ಕಸ
ಬೆರಗುವಟ್ಟು ''ಎಂತಪ್ಪ ಅಪೂರ್ವ ದೃಶ್ಯಂ !
ಅರಮನೆಯಲ್ಲಿ ಸೊಗದ ಸುಧೆಯೊಳ್ ತಾನಿರದನಿತು
ಅಭಾಗ್ಯಳೊ ಮೇಣ್ ನಿಜಭಕ್ತಿಯೊ ತಿಳಿವುದೆಂತು !''
ಎಂದು ತಂತಮ್ಮೊಳಾಡಿ ಮೂಗಿನ ಮೇಲ್ಬೆರಳ್

ಇಟ್ಟು ನಿಡುಗಣ್ಗಳಿಂ ವೀಕ್ಷಿಸುತಿರಲ್ ಭಕ್ತೆ
ಆರನೇಂ ಲೆಕ್ಕಿಸದೆ ದ್ವಾರಕನಾಥನಾ
ಸನ್ನಿಧಿಗೈದು ಮನದುಂಬಿ ಆರಾಧಿಸುತ
ಭಜನಗೇಯಮಂ ಪಾಡಿ ಭಕ್ತಿರಸಂ ಸೂಸಿ
ಕಂಬನಿಯೊಳ್, ತದೇಕಭಾವದಲಿ ತಂತಾನೆ
ಮರೆತು ತಪಶ್ಶೀಲಳಾದಳ್ ಪ್ರಜ್ಞೆದಪ್ಪಿವೊಲ್ !
ಆಗಳುಂ ಮೇಡತಾ-ಚಿತ್ತೂರುಗಳಿಂದೈದ
ಜನರ್ ಮೀರಾಬಾಯಿಯಂ ಕಂಡು ಕೈಮುಗಿದು
''ನಿಮ್ಮ ಕರೆತರಲೆಮ್ಮನುಂ ಕಳಿಪಿದರ್ ರಾಣ,''
ಎಂದು ದೈನ್ಯದಿಂ ಬಿನ್ನವಿಸಿದರ್ ಅದರ್ಕಾ
ಶ್ರೀವನಿತೆ ವಿನಯದಿಂ ತಿರಸ್ಕರಿಸುತೆ ''ದೇವ
ಸನ್ನಿಧಿಯೊಳಾನಿಲ್ಲಿ ಪರಿಮ ಸುಖಿ! ನಿಮ್ಮೊಂದು
ಕರುಣೆಯ ಕರೆಗಾಂ ಋಣಿ. ಆದೊಡಂ ಪಿಂತಿರುಗಿ
ಬರಲಾರೆ. ಎನ್ನಪ್ರಿಯತಮನಂ ಬಿಟ್ಟೆಂತು
ಬಂದಪೆಂ ಪೇಳಿರೈ?'' ಎನಲ್ ಆ ಬಂಧು ಜನತತಿ
ಪಟ್ಟುಬಿಡದೆ ಕಟ್ಟೊತ್ತಾಯಗೈಯಲ್ ಮನದೆ
ಚಿಂತಿಸಿ ನಮೆದು ನೊಂದು ಕಂಬನಿ ಮಿಡಿದು ನುಡಿಯೆ
ಬಾಯಿ ಬಾರದಂತಾಗೆ ಗೋಳಾಡಿ ಅಳುತಲಿ
''ಬಂಧುಗಳೇ! ಇಂದು ರಣಛೋಡಜೀಯಾ ದಿವ್ಯ
ದರುಶನಂ ಪಡೆದನಂತರಂ ನಿಮ್ಮೊಡಂ ಆಂ
ಪಿಂತಿರುಗಿ ಬಂದಪೆಂ'' ಎಂದು ರಣಛೋಡಜೀ
ದೇಗುಲಕ್ಕೈದು ಪೂಜಿಸಿ ಧ್ಯಾನಿಸಿ ನಮಿಸಿದಳ್,
ಪಾದದ್ವಯಗಳಂ ತಬ್ಬಿ ಕಂಬನಿಯ ಕೋಡಿಯಂ
ಪರಿಸಿದಳ್ ತಾನರಿಯದೊಲ್. ಅದೆ ಮಹೂರ್ತದಲಿ
ತನ್ನಯ ಮನೋವಲ್ಲಭನ ಭವ್ಯ ಮೂರ್ತಿಯೊಳ್
ಐಕ್ಯಳಾದಳ್! ಬಹುಜನಬಾಹುಳ್ಯಮಿರ್ದಾ
ಭವ್ಯ ದೇಗುಲದಲಿ ಅಖಿಲ ಜನತತಿ ಬೆಕ್ಕಸ

ಬೆರಗುವಟ್ಟು ನೋಡುತ ಒಕ್ಕೊರಲಿಂದೊರ್ಮೆಗೇ
ಉದ್ಘೋಷಿಸಿತು! ಮೀರಾಬಾಯಿ ಪರಮ ಧನ್ಯೆ!!
ಓ! ಮಹಾಪ್ರಭೋ ಇಂದಿನೆಮ್ಮಯ ಬಾಳ್ಗಡಲ
ಸರಿತ್ ಸಾಗರದೊಳಾವು ಇಂತು ಪೊರವೊರಡಲ್
ಹೊಸ್ತಿಲಂ ದಾಂಟುವುದರೊಳೆ ಪಿರಿದು ಬಲವಂದು
ತಿನ್ನರೇಂ ಈ ಮನುಕುಲಜರ್ ಪೇಳೆನ್ನೊಡೆಯಾ!
ಗೃಹಬಂಧದೊಳೆಮಗೆ ಉಳಿಗಾಲಮಿಲ್ಲಮೆನೆ
ಪೊರಗಡೆ ಉಳಿಯಲ್ಕುಂಟೇ? ರೋಮರೋಮಮಂ
ಕಿತ್ತು ವಿಚ್ಛನ್ನಗೊಳಿಸರೇಂ ಈ ಲೋಕದಾ
ಹಲವುಹತ್ತು ಕಾಮನೆಯ ಧೂರ್ತ ಪಿಪಾಸಿಗಳ್!
ಉದ್ಧರಿಪರಾರಯ್ಯ ಪ್ರಸಕ್ತ ದುರ್ಬುದ್ಧಿಯ
ಮನುಕುಲಕೋಟಿಯಂ? ಕೈಮುಗಿದು ಕಾಲ್ವಿಡಿದು
ಕಂಬನಿ ಮಿಡಿದು ಬೇಡುವೆನಯ್ಯ ತವಪಾದದ
ನೆಲೆಯಂ ಬಯಸಿದಾನು ಮಲ್ಲಿಕಾ ಬನದೊಳ್
ಮೊಲ್ಲೆಯಾಗುಳಿದಿರ್ದೊಡೆ ಕೊರವೇನಿತ್ತೊಡೆಯಾ?
ಕೆಸರ ಭಾಗ್ಯದೊಳ್ ಬರ್ದುಕು ಅಳವಡಲಕ್ಕುಮೆ?
ಬಾಳ್ಬೆಂಕೆಯಲಿ ಸುಡುವ ತನುಮನಂ ತಣಿವಂತು
ಚಿತ್ತಕಲ್ಪಂ ತಣಿವಂತು ಸಂಬಾಳಿಸೆನ್ನಂ
ನೀನಿಲ್ಲದಿನ್ನಾರಿಹರ್ ಪೇಳೆನ್ನೊಡೆಯಾ!
ವಿಜ್ಞಾನಯುಗೀಯ ತೆರೆದ ಕಣ್ಮುಂತೆ ನಡೆವ
ಅನೀತಿ-ಅಧರ್ಮಗಳ ನೀಂ ಕಾಣದಿರ್ಪೆಯಾ?
ಕಂಡುಕಂಡು ನೀ ಸುಮ್ಮನಿರಲೇನು ಕಾರಣ
ಆನರಿಯದಾದೆನಯ್ಯ? ನೀನಿನ್ನಾದೊಡಂ
ಬಂದು ಮೀರಾಬಾಯಿಯಂ ರಕ್ಷಿಸಿದವೋಲ್
ಈ ಜಗದ ದುರ್ಗತಿಯನಳಿಸಿ ಪರಿಪೋಷಿಸಲು
ಬಾರಯ್ಯ ಮುಂದೆ ಎನ್ನಯ ಜೀವನದೊಡೆಯಾ!

— o —

# ಘೋರ ತಪಸ್ಸಾಧನೆ

ಶ್ರೀ ಕಾಸಿ ಕ್ಷೇತ್ರಾದಾ ಮಠದಲೊರ್ಮೆ ನೆಲೆನಿಂದಿರ್ದ
ಶ್ರೀ ರಾಮಕೃಷ್ಣ ಪರಮಹಂಸರ್ ಬೈಗುವೊಳ್ತಿನೊಳ್
ಗಾಳಿ ಸೇವನೆಗೆಂದು ತಾವೊರ್ವರೆ ಶ್ರೀಮಠದಿಂದೆ
ಹೊರಟರಂದು, ಸನಿಹದೊಳ್ ಹರಿಯತಿಹ ಗಂಗಾನದೀ
ಪಾತ್ರದಲಿ. ಜುಳುಜುಳು ಕಿವಿಗೊರೆವ ನದಿಯ ಮೃದುಗಾನ
ಮನದಲಿ ಧುಮುಧುಮಿಸುವ ಪರಮ ಭಕ್ತಿಯ ದಿವ್ಯಗಾನ
ಒಗ್ಗೂಡಿ ಪ್ರಾಣವಾಹಿನಿಯ ಚೋದಿಸುತಿರೆ ನಡೆದರು
ಮುಂದೆ, ಮುಂದೆ; ತಣ್ಣನೆ ತಂಗಾಳಿಯ ಚಾಮರಕೆದುರು
ಮುಖವೊಡ್ಡಿ. ನೇರ ದೃಷ್ಟಿಪಥದೊಳ್ ಕಾಂಬ ಸುರಹೊನ್ನೆ
ಮರದಡಿ ಬಹುಜನಂ ಗುಂಪುಗೂಡಿರ್ದುದಂ ಕಂಡು
ಚಿತ್ತದಲಿ ಕುತೂಹಲ ಕೆರಳಿ ಸಾಗಿದರ್ ಅತ್ತಲೇ.

ಆಗಳಲ್ಲಿರ್ದ ಉತ್ಸುಕ ಜನರ್ ರಾಮಕೃಷ್ಣಯತಿ
ವರ್ಯಂಗೆ ಕರಜೋಡಿಸಿ ಗೌರವದಿಂ ಸ್ವಾಗತಿಸಿ
ಉಚ್ಚದನಿಯಿಂ 'ಜೈ ಗುರುದೇವ!' ಎನಲ್ಕೆ ಉದ್ಘೋಷ
ಮೊಳಗಿದುದು ತಾಂ ಜಲಸಲಿಲದ ಶೃತಿನಾದಂಗೂಡಿ
ಜನಜಂಗುಳಿಯ ಮಧ್ಯದಿಂದಾಗಳ್ ಮುಂದೈದು ನಿಂದ
ಋಷಿಯೊರ್ವನ್ ಬಲು ಬೀರದಿಂ ಜೋರಿನಿಂ ಕೇಳಿಸಿದ
ನೆಂತೆನೆ ''ಕಿವಿಗೊಟ್ಟಾಲಿಸಿರೈ ಓ ಎನ್ನ ಸೋದರರೆ,
ಹಿಮಾಲಯ ಪರ್ವತದ ತಪ್ಪಲಿನಲಿ ನಲೆನಿಂದಾನು
ಹತ್ತು ವರುಷಗಳ್ ಪಗಲಿರುಳ್ ತಪವಂಗೈದು, ಪಿಂತೆ
ಆರೂ ಗಳಿಸದಿರ್ದ ಮಹತ್‌ಶಕ್ತಿ ಸಂಪತ್ತಿಯಂ
ಪಡೆದಿರ್ಪುದನಿಲ್ಲಿ ನಿಮಗಾಂ ಪ್ರದರ್ಶಿಪೆಂ! ಗೈಮೆ
ಪುಸಿಯಲ್ತು. ನೀಮೆಲ್ಲರೀ ಸಾಸಕೃತ್ಯಮಂ ಕಂಡ
ಬಳಿಕಮೆ ಅಹುದೆನ್ನಿರಿ! ಮೈಯಭಾರಮೆಲ್ಲಂ ಇಳಿಸಿ

ಗಂಗಾನದಿ ಜಲರಾಶಿಯ ಮೇಲೆ ಸರಾಗದಲಾನು
ನಡೆಯ ಬಲ್ಲೆ. ಇದುಂ ಪರಬ್ರಹ್ಮನ ವರ ಬಲದಶಕ್ತಿ
ಕಣಾ! ಮೇಣ್ ಸಾಸಂ ಕಣಾ!'' ಎನುತಂ ಬಿತ್ತರದ ಗಗನ
ದೆಡೆಗೆ ಕೈಜೋಡಿಸಿ ಮನದೊಳಿಷ್ಟ ದೈವವಂ ನೆನೆದು
ನೀಳ ಗಡ್ಡಮಂ ತೀವಿ ಗಂಗಾನದಿ ಜಲದ ಮೇಲೆ
ಸರಾಗದಲಿ ನಡೆದು ಎದುರು ತಟಾಕಮಂ ಸೇರಿದಂ!
ಅತ್ತಲೇ ಕಣ್ಣೆಟ್ಟು ಬೆರಗಾಗಿ ನೋಡುತಿರ್ದೆಲ್ಲ
ಜನರಾಶಿ ಹರುಷವುಕ್ಕುಕ್ಕಿ ಬೆಕ್ಕಸ ಬೆರಗುವಟ್ಟು
ಬೋಂಕನೆ ವಿಜಯ ಘೋಷಗೈದರ್ ಮನಪುಳಕವುಕ್ಕಿದವೊಲ್
ಓವೊ ಪೇಳಲೇನದಂ? ಮತ್ತೆಮತ್ತೆ ಮೊಳಗಿತದೇ
ವಿಜಯಘೋಷಂ, ಏರು ದನಿಯಲಿ ನಭಕೇರ್ವಡುವಂತೆ!

ಇಂತಿದಂ ನೋಡುತಮೊಗದೊಳ್ ಮಂದಹಾಸಂ ಸೂಸಿ
ಶ್ರೀರಾಮಕೃಷ್ಣಪರಮಹಂಸರ್ ಅಲ್ಲಿರ್ದ ಭಾಸ
ನೆಂಬ ಕಿರುನಾವಿಗನ ಕರೆದವನ ಕೈಯೊಳ್ ಇರಿಸುತ
ನಾಲ್ಕಾಣೆಯಂ ನುಡಿದರಿಂತು ''ಅಯ್ಯ, ಎನ್ನನೆದುರಿನ
ತೀರಮಂ ಮುಟ್ಟಿಸೈ.'' ಆ ಮಾತ ಕೇಳ್ದು ನಾವಿಗಂ
ಮಿಣಿಗಳಚಿದ ನಾವೆಯ ಹುಟ್ಟುಹಿಡಿದು ಸಂತಸದಿಂದ
ಪಾಡುತಲಿ ದಾಂಟಿಸಿದ ನದಿಯಾಚೆ ದಡಕೆ. ಬಳಿಕಲಾ
ರಾಮಕೃಷ್ಣರ್ ದೋಣಿಯಿಂದಿಳಿದು ಮುನಿವರ್ಯನೆಡೆಗೆ
ಸಾರ್ದು ನೇಹದಿಂತೆಂದರ್ ''ಕೇಳ್, ತಪೋಧನನಾದ
ಮುನಿವರ್ಯನೆ ನಿನ್ನಯ ಘೋರ ತಪಸ್ಸಿನಾ ಬೆಲೆಯು
ಇಂದು ಬರಿ ನಾಲ್ಕಣೆ ಮಾತ್ರವೈ!'' ಪರಮ ಹಂಸರಾ
ಮುಮ್ಮಾತು ಕೂರ್ಮುಳ್ಳಿನಂತೆ ಪುಗಲ್ ಮನಮಂ ಮುನಿಯು
ಆಶ್ಚರ್ಯ ಚಕಿತನಪ್ಪಿ ನುಡಿದಂ ''ಇದೇನಿಂತು ಪಳಿವೆ?
ಅಣ್ಣಾ! ಎನಿತೆನಿತು ಜನರ್ ಪಾಡಿಪೊಗಳಿರುವರೆನ್ನ
ಜಸಮಂ ಕುರಿತು; ನೀನರಿಯೆನದಂ. ನಿನ್ನ ಮಾತೆನಗೆ

ಅರ್ಥಮಾಗದೆ ಕುತೂಹಲಂ ಕುದಿಯುತಿದೆನ್ನ ಮನದಿ,
ಏನಿರ್ದೊಡಂ ವಿವರಿಸಿ ಪೇಳ್ವೆ'' ಎನಲವಂ ರಾಮ
ಕೃಷ್ಣ ಪರಮ ಹಂಸರ್ ನುಡಿದರೆಂತೆನೆ ''ಕೇಳ್, ಮುನಿಪ
ನಿನ್ನ ಕಣ್ಮುಂತೆ ನಾವಿಗನೆನ್ನಂ ನಾಲ್ಕಾಣೆಯಂ
ಕೈಕೊಂಡು ನದಿ ದಾಂಟಿಸಿದುದಂ ಕಂಡೆಯಲ್ತೆ? ಇದುಂ
ಅತಿ ಸುಲಭಮಿರ್ಕೆ ಮತ್ತೇಕೆಲೆ ತಪತ್ಸಾದನೆಯಾ
ಕಠಿಣವ್ರತಂ? ಮುನಿಜನರ ತಪೋಬಲಂ ಭವದಿಯೊಳ್
ಬರೀ ನದಿಗಳಂ ದಾಂಟುವರೆ ವಿನಿಯೋಗಮಾದೊಡದು
ದಿಟ್ಟತನಮಲ್ಲದೆ ತಪೋಧನಮೆನಿಪುದೆ ಪೇಳಯ್ಯ?
ಆನಿಂತೆನೆ ಕೋಪಿಸದೆ ಇಂತಪ್ಪ ಪವಾಡಗಳಂ
ಕೈವಿಟ್ಟು ಮುಂದೆ ಲೋಕಾತ್ಮ ಕಲ್ಯಾಣಕ್ಕಾಗಿ ನೀಂ
ಶ್ರಮಿಸಿ ತಪಸ್ಸಾಚರಿಪುದು ಒಳ್ಳಿತು; ಯೋಚಿಸ್ವೆ.''

ಶ್ರೀರಾಮಕೃಷ್ಣರೆದೆ ತುಂಬಿ ಇಂತಪ್ಪಣೆಯೀಯಲ್
ಆ ಮಹರ್ಷಿಯು ನಾಚಿ ನೀರಾಗಿ ಶ್ರೀ ಮದ್ಗುರುಗಳ
ಚರಣಕಮಲಕ್ಕೆರಗಿ ಕ್ಷಮೆಯಂ ಯಾಚಿಸಿ ''ಗುರುಗಳೆ,
ನೀಮಿಂದು ಕೃಪೆದೋರೆ ತೆರೆಸಿದರೆನ್ನೊಳಗಣ್ಣುಗಳ
ಇನ್ನುಮುಂತೆ ನಿಮ್ಮ ಅಭೀಪ್ಸೆಯೊಳ್ ಆನುಮೀಲೋಕ
ಕಲ್ಯಾಣ ಕಾರ್ಯಾರ್ಥ ಶ್ರಮಿಪೊಂದು ದೀಕ್ಷೆಯ ನಿಂದು
ಬಾಳ್ವೆನೆಂದೆಂದು ನಿಮ್ಮ ಮುಂದೆಯೆ ಪೂಣ್ದಪೆಂ.'' ಎನಲ್
ಶ್ರೀರಾಮಕೃಷ್ಣರಾಗ ನಲವಿಂದೆ ಆಶೀರ್ವದಿಸಿ,
''ಕೇಳ್, ಮುನಿಪ! ತಪಸ್ಸೆಮ ಆತ್ಮವೃದ್ಧಿ-ಜ್ಞಾನವೃದ್ಧಿ
ಮೇಣ್ ತ್ರಿಲೋಕ ಸಂವೃದ್ಧಿಗಳ ಅಡಿಗಲ್ಲೆನಿಪೊಲ್
ಮುನಿಜನರ್ ತಪಶ್ಚರ್ಯದಲಿ ನಿಂದು ಜೀವನಂ ನಿಜದಿ
ಉದ್ಧರಿಪುದೆ ಸದ್ಧರ್ಮ-ಸದ್ಗತಿಗಳೆಂಬುದನು ನೀಂ
ತಿಳಿಯಾ.'' ಎಂದುಪದೇಶಿಸಿ ಪೊರಟರ್ ಅಲ್ಲಿಂದ ಅದೇ
ನಾವಿಗನ ನಾವೆಯೊಳ್ ಕುಳಿತು ಈಚೆಯ ತಟಾಕಕ್ಕೆ.

ಅವರ ಪುನರಾಗಮನವಂ ನಿರೀಕ್ಷಿಸುತ ನಿಂದಿರ್ದ
ಜನಜಂಗುಳಿಯಲ್ಲಿ ಕುತೂಹಲ ಕೆರಳುತಲಿರೆ ಬಿಂಕ
ಬಲಿತ ಪಿರಿಯನೊರ್ವ ಕೇಳಿದಂ ''ಇದೇಂ ಪೊಸ ಕೊಂಕು?
ಸ್ವಾಮೀ, ಅವರ್ ಬರೀಗಾಲೊಳ್ ನಡೆದು ಹೋದ ಬಳಿಕ
ನೀವ್ ದೋಣಿಯಲಿ ಪಯಣಿಸಿ ಸಾಧಿಸಿದುದೇನು? ಎಂದು
ತಿಳಿಯಬಹುದೆ?'' ಅಗಳ್ ಪರಮಹಂಸರ್ ನಗುಮುಖದಿಂ
ಇಂತೆಂದರ್,

''ಮಾನ್ಯರೇ, ಮುನಿಜನಗಳ್ ಪವಾಡಕ್ಕಿಳಿದು
ಜನರಂ ಮರಳುಗೈದು ತಮ್ಮ ಆತ್ಮೋದ್ಧಾರ ಮೇಣ್
ನಿಚ್ಚಲೋಕೋದ್ಧಾರಗಳಿಂ ವಿಮುಖಗೊಳ್ವುದು ಸಲ್ಲ.
ಅಷ್ಟುಮಾತ್ರ ನಿಮಗೊರೆವೆಂ; ಅವರಿಗಿದೇ ಬಿನ್ನಪಂ.''

ಆಗಳ್ ಅವರೆಲ್ಲರ್ ಪರಮಹಂಸರ ನುಡಿಗೆ ಮಣಿದು
ಭಕ್ತಿಯಿಂ ಪೂಜ್ಯಭಾವದಿಂ ತಲೆಬಾಗಿ ನಮಿಸಿದರ್.
ಶ್ರೀರಾಮಕೃಷ್ಣಪರಮಹಂಸರ್ ನಲ್ಮೆಯಿಂದವರ
ಬೀಳ್ಕೊಟ್ಟು ಪಿಂತಿರುಗಿದರ್ ತಾವ್ ನೆಲೆನಿಂದ ಮಠಕೆ.

— ೦ —

# ಮತದ್ವೇಷೋಪನಿಷದ್ವಾಹಿನಿ

ಒಡೆಯಾ! ತವ ಸೃಷ್ಟಿನಿಯಮದ ಋತಚಕ್ರದಲಿ
ಎನಿತು ಸುಂದರ ಕಠೋರ ನಿಯಮಾವಳಿಯೆಯ್ಯಾ!
ಎಲ್ಲಿಯುಂ ಕಿಂಚಿತ್ ಸಡಿಲತೆಯಿರದ ಜಟಿಲತೆ.
ನೀನಿಷ್ಟು ಚತುರನಿರೆ ಅಗೋಚರತೆಯೇಕೋ
ಅರಿಯದಾದೆನ್ನೈ!
ಒಡೆಯಾ! ನೀಂ ಎದುರಿಲ್ಲದೆ
ಈ ಭುವಿಯೊಳ್ ಎನಿತೆನಿತು ಅನೀತಿ-ಅನ್ಯಾಯ-
ಅಧರ್ಮಗಳ ಪರಿಪೋಷಣೆ ತಿಳಿಯೆಯಾ ದೊರೆಯೆ!
ಮೂಡಣದ ತಟಾಂತ ಲಗ್ನದೊಳ್ ಬಲ್ಮೆಯಿಂ
ರವಿಯ್ಯೆತರೆ ತ್ರಿಲೋಕ ಸೇವೆಯ ನೇಮದೊಳ್
ಎನಿತು ಸುಖಶೀತಲ ಸುಶಾಂತಿ ಈ ಭುವನದಲಿ!
ತವಸೃಷ್ಟಿ ನಿಯಮಮಂ ಸೂರ್ಯ ಚಂದ್ರ ಸಹಿತಂ
ಎಲ್ಲ ಗ್ರಹಗಳ್ ದಿನ ನಿಚ್ಚ ನಡೆಯಲಿ ಕಿಂಚಿತ್
ರೇಖಾಪಥ ನಿಯಮಂ ಮೀರದೆ ನಡೆಯುತಿರಲ್
ಕಂಡು ಕಂಡು ಅರಿತರಿತು ಈ ಪ್ರಜಾಕೋಟಿ
ಏಕಿಂತು ಹದ್ದು ಮೀರ್ವುದೊ ತಿಳಿಯದು ಒಡೆಯಾ!
ಇಂತಪ್ಪ ದುಃಖಗಡಲಂ ಪಾಯ್ವ ಪರಿಪಾಡು
ಎಂದುಮೆಂದಿಗೂ ಹೆಂಗರುಳಿಗಲ್ತೆ? ಧರೆಯೊಳ್
ದಾರುಣದೆಶೆ ಪರಿಯದೆ ಎಲ್ಲಿಯ ಭುವನ ಶಾಂತಿ?
ಒಡೆಯಾ! ತವ ಬ್ರಹ್ಮಾಂಡದ ಪಚ್ಚವರ್ಣ ತರು
ಗೋಷ್ಠಿಯಲಿ ಎನಿತೊಂದು ವಿಧವಿಧ ವರ್ಣಮಯ
ಸಸ್ಯರಾಶಿ! ಎಲೆ, ಕಾಂಡ, ಹೂ ಮುಂತಪ್ಪ
ಎಲ್ಲಂ ಬೇರೆವೇರೆಯೆ! ಜಾತಿವರ್ಗಕೆಣೆಯೇ

ಇಲ್ಲಂ! ಅದರ ಪರಿಪರಿಯ ವರ್ಗ ಪ್ರಭೇದ
ಅರಿಯಲಾವಾವ ಮಾನದಂಡಂ ವೇಳ್ಕುಮೋ
ಅಂತಪ್ಪ ಮಹಾ ಪರ್ಣಾರ್ಣವದಲೇಂ ಶಾಂತಿ!
ಪಶುಪಕ್ಷಿಗಳ ವರ್ಗ, ಜಲಚರಂಗಳವರ್ಗ
ಸಾಮಾನ್ಯವಲ್ಲವೈ ತವ ಸೃಷ್ಟಿರಂಗದಲಿ!
ಅಸಂಖ್ಯ-ಅಗಣ್ಯ ವರ್ಗಗಳ ಮಹಾ ಪ್ರಣಾಳಿ!
ಇಂ ಮನುಜಮಾತ್ರರಲಿ ಎಲ್ಲಿಯ ಜಾತಿ ಮತವೈ?
ಕೈಕಾಲು ಕಣ್ಕಿವಿ ತಲೆ ಮೂಗು ಎಲ್ಲಂ ಒಂದೇ!
ಕೋಡಿಲ್ಲ; ಕೋರೆಯಿಲ್ಲ; ಮತ್ತೇಂ ಮತಭಾವ?
ಒಡೆಯಾ ! ನರಜನುಮಂ ಜೀವಕೋಟಿಯಲಿ ಬಲ್
ಶ್ರೇಷ್ಠ ಎನುತವೆ ವೇದ ವೇದಾಂಗಗಳ್! ಇಂದು
ಶ್ರೇಷ್ಠತೆಯ ತುತ್ತತುದಿಯನೇರಿದ ಮಾನವ
ಜ್ಞಾನ-ವಿಜ್ಞಾನದ ಪರಮೋಚ್ಚಪದಮಂ ನಿಜ
ಪೌರುಷೇಯ ಪ್ರವೃತ್ತಿಯಿಂ ತಾನಾರ್ಜಿಸಿದ
ಸಕಲ ವಿದ್ಯಾಸಂಪತ್ತಿ ನೆನೆಯಲೆನಿತಂದಮೊ
ರಸ ಚೇತನ ಪರಿಪೂರ್ಣ ಹೃದಯ ಸಾಮ್ರಾಜ್ಯಕೆ
ಮಾನವಂ ಬುದ್ಧಿಜೀವಿ! ಹಂತಹಂತದೊಳ್
ಸಗ್ಗದೆತ್ತರಕೆ ಏರಿನಿಂದಿಹ ತೀಕ್ಷ್ಣಮತಿ!
ಇಡೀ ಜಗಮಂ ತನ್ನ ಅಂಕೆಯೊಳ್ ಹಿಡಿದಿಟ್ಟ
ಚಾಣಾಕ್ಷ! ಸಾಹಿತ್ಯ-ಸಂಸ್ಕೃತಿ ಕ್ಷೇತ್ರದೊಳ್
ಮನಸ್ಸಾಗರಂ ಮಥಿಸಿ ರಾಗಾರುಣ ತಾನಂ
ಮಿಡಿಸಿದ ಘನವಂತ! ರಸಾಯನ ಶಾಸ್ತ್ರ, ನ್ಯಾಯ
ಶಾಸ್ತ್ರ, ವೈದ್ಯಶಾಸ್ತ್ರ ಮೊದಲ್ಗೊಂಡು ಎಲ್ಲತರ
ಶಾಸ್ತ್ರಕೂ ಶಾಸ್ತ್ರಗಾರನಿರೆ ಎಂತಾಮೋದ
ಜನಕವೈಮನಕೆ ಪರಿಭಾವಿಸಿದೊಡೆ
ಭಗವನ್ !

ಇಂತಪ್ಪ ಜ್ಞಾನನಿದಿ! ಪ್ರಜ್ಞಾನ ಪ್ರಾಚಾರ್ಯ!
ಇಂದು ಈ ನಾಗರಿಕ ವರ್ತಮಾನ ಯುಗದೊಳ್
ಎಸಗುತಿಹ ಪೇಸುಕಾರ್ಯಂ ಕೇಳಲಾರೆನೋ
ಕಿವಿವೊಡ್ಡಿ! ಕಾಣಲಾರೆನೋ ಕಣ್ ತೆರೆದು! ಈ
ಜಗದ ಜಂಜಡವ ಏಂವೇಳ್ವೆನ್ಯೆ ತಂದೆಯೇ!
ಧರ್ಮಗೊಲೆ, ನೀತಿಗೊಲೆ, ನ್ಯಾಯಗೊಲೆ, ಪೆಣ್ಗೊಲೆ
ಇದೆಲ್ಲಂ ಎಂತುಸಾಧ್ಯವೈ ಮನುಜ ಮತದಲಿ?
ದ್ವೇಷ! ದ್ವೇಷ! ಎಲ್ಲೆಡೆಯುಂ ದ್ವೇಷದಗ್ನಿ ಧಗ
ಧಗಿಸಿ ಉರಿಯುತಿರೆ ಜನಪದಂ ಸುಟ್ಟುರಿದು ಚಟ
ಪಟಾಯ ಮಾನದಿಂ ಬೇಯದೇಂ? ಪೇಳ್ ಒಡೆಯಾ!
ಮನುಜ ಮತದಲಿ ತೊಡೆಯಲಾಗದ ಕಡುದ್ವೇಷದ
ಜ್ವಾಲಾಗ್ನಿ ಧಗಧಗಿಸಲೇಂ ಕಾರಣಂ? ಮನುಜ
ಎನೆ ಎಲ್ಲರುವೊಂದೆಯಲ್ತೆ? ವಿವಿಧಮತಮೆನಲ್
ಮತಿಮೌಢ್ಯದ ಅತಿರೇಕಮಲ್ಲದೆ ಬೇರಿಲ್ಲಂ.
ಎಲ್ಲಮಿರ್ದೇನಿಲ್ಲದಶಾಶ್ವತ ಜೀವನೀ
ವಾಹಿನಿಯಲಿ ಏಕಿಂತು ಸ್ವಾರ್ಥತೆ ತುಂಬಿದುದೊ
ತಿಳಿಯದಾದೆನ್ಯೆ! ಎಲ್ಲಿಯುಂ ಮತದ್ವೇಷ
ಕಿಚ್ಚೆದ್ದು ಕಡುಗತ್ತಿ, ಚೂರಿ, ಕೋವಿ ಮುಂತಪ್ಪ
ಕೂರಾಯುಧಗಳಿಂ ತಲೆತಲೆಯಂ ತರಿತರಿದು
ಪುಣ್ಯಭೂಮಿಗೆ ರಕ್ತಸೇಚನೆಗೈವರಲ್ತೆ!
ನಿರಾಯುಧರಂ ನಿರಪರಾಧಿಗಳಂ ಕೊಲಲೆಂತು
ಬಪ್ಪುದು ಮನಂ? ಜಾತಿಮತಕೇಂ ಕಿರೀಟದ
ಬೆಡಗಿರ್ಪುದೇಂ? ಜಾತಿಗಾಗಿ ಹಿಂದೂ-ಮುಸ್ಲಿಂ
ಮಾರಾಮಾರಿ! ರಕ್ತ ರಕ್ತ ಎಲ್ಲೆಡೆ ರಕ್ತ
ಸಿಂಚನ! ಮರಣಸಂಕಟದ ರಣಗೋಳು! ದುಃಖ!
ದುಃಖವನ್ನೆ ದುಃಖಿತಗೊಳಿಸುವ ಪರಮ ದುಃಖ!

ಕಾಲಾನುಕಾಲದಿಂ ಒಂದೇ ಭುವಿಯಲಿ ಪುಟ್ಟಿ
ಒಂದೇ ನೀರಿನ ಹಂಚಿಕೆಯಿಂ ಬಾಳಿ ಬರ್ದುಕಿ
ಸೋದರ ಬಂಧುರತೆ ಕಳೆವರೇ! ಮತದ್ವೇಷ
ಏಕಿಂತು ಮೈವೆತ್ತುದು ಕೂರ ವಿಷ ಜ್ವಾಲಾ
ವಹ್ನಿಯಂ ಪರಿಸಿ, ಸಜ್ಜನರಂ ಸನ್ಮಿತ್ರರಂ
ನಿರ್ದಯೆ ನಿಷ್ಕರುಣೆಗಳಿಂ ಸುಡುಗೋಲಿ ಒಗೆದು
ಕೊಲಲೆಂತು ಮನಸಂತು? ಭಾರತೀಯತೆಯ ನೀತಿ
ಸಂಹಿತೆಯೇಂ? ಸಂಸ್ಕೃತಿಯೇಂ? ಧರ್ಮವೇಂ? ನಿತ್ಯ
ಸತ್ಯಮಾಧುರ್ಯವೇಂ? ಇಂದಿನ ಅಮಾನವೀಯ
ಕೊಲೆಗತನವೇಂ? ಎಲ್ಲಿ ನಮ್ಮ ಭ್ರಾತೃತ್ವ? ಎಲ್ಲಿ
ಸ್ನೇಹ ಬಂಧುರತೆ? ಎಲ್ಲಿ ಮಾನವೀಯ ಮಾಧುರ್ಯ?
ಏಗಳುಂ ತಿಂದುಂಡು ನೆಣಗೊಬ್ಬಿನಿಂ ಸೊರ್ಕಿ
ಪೆತ್ತವರ ಬಂಧು ಬಳಗದವರ ಕದಪುಗಳಂ
ಕಂಬನಿಯ ಕೋಡಿಯಲಿ ತೊಯ್ಸಿ ಭಾರತ ಮಾತೆಯ
ಒಡಲಿಗೆ ಕಿಚ್ಚಿಕ್ಕುವ ಹಿಂಸೆ! ರಣಹಿಂಸೆ! ಅಯ್ಯೋ!
ಪರಮ ಹಿಂಸೆ! ತಾಳಲಾಗದ-ಅನುಭವಿಸಲಾಗದ
ನೋವಿನ-ಕಡು ನೋವಿನ ವ್ರೀಡೆ! ಪ್ರಾಣಾಂತಕ
ಕ್ರೀಡೆ!! ಪೂಜ್ಯ ರಾಷ್ಟ್ರಪಿತ ಗಾಂಧೀಜಿಯ ಪ್ರಾಣ
ಹರಣಲೀಲೆ! ಕಲ್ಮನದ ಕಾಪುರುಷಂ ಗೈದ
ಕುಮತಿಯ ಕಠಿಣ ಪೀಡೆ!!
ಭಗವನ್ ! ಸಲ್ವುದೇಂ
ಇಂತಪ್ಪ ಕೂರ ಕುಮತಿಯ ಕ್ರೀಡಾ ಲೋಭಂ
ಭಾರತ ಜನನಿಯಾ ವೇದ ಸಂಸ್ಕೃತಿ ಪರಿಮಳ
ಪೂತ ಜೀವನಿವಾಹಿನಿಗೆ-ಪರಮ ಜನಪದಕೆ?
ವರ್ತಮಾನಯುಗದಲಿ ನರಜನುಮವೆತ್ತಿಯುಂ
ಭ್ರಾತೃತ್ವವಿಲ್ಲಂ! ಸ್ನೇಹ ಬಂಧುರತೆಯಿಲ್ಲಂ!

ಮಾನವೀಯತೆಯ ಮಾಧುರ್ಯಮಿನಿತಿಲ್ಲಂ!
ಇಂತಪ್ಪ ಕುಕರ್ಮಗತಿವೊದವಿತೆ ಭಾರತಿಗೆ?
ಸ್ವಾತಂತ್ರ್ಯಸವಿಯುಂಡು ಸರ್ವಾತ್ಮ ಚಿಂತೆಯಿಂ
ಸೃಜನತೆ-ಸೌಶೀಲ್ಯತೆ ಮುಂಬೆಳೆಯಲಕ್ಕುಂ!
ಆದೊಡಿದೇಂ ತಿರುವುಮುರುವು! ಕುಲಕೋಟಿಗೆ
ತಾಂ ಮೃತ್ಯುಮಾರಿಯೈದ ಕಡುಹೀನ ಕಜ್ಜಂ!
ಪಂಜಾಬಿನ ಮತದ್ವೇಷ ಎನಿತೆನಿತು ಕ್ರೂರಂ?
ನಿರಪರಾಧೀ ಸಜ್ಜನರ್ ಸನ್ಮಿತ್ರರ್ ಮೇಣ್
ನಿರಾಯುಧರ್ ಸಹಸ್ರ ಸಹಸ್ರ ಮಂದಿ ಅನ್ಯಥಾ
ಮೃತ್ಯುಮಾರಿಯ ಮಾರಣ ಹೋಮಕೆ ಬಲಿಯಾಗಿ
ರಕ್ತತರ್ಪಣಮಿತ್ತರಲ್ತೆ ಮಾತೃ ಭೂಮಿಗೆ
ಎನಿತೆನಿತು ಮಂಗಳೆಯರ ಮಾಂಗಲ್ಯ ಹರಣಂ!
ಎನಿತೆನಿತು ಮಕ್ಕಳ ಭಾಗ್ಯ ಹರಣಂ! ಎನಿತೆನಿತು
ತಾಯ್ತಂದೆಯರ ಜೀವನ ಹರಣಂ! ಇಂತಪ್ಪ
ಮತ ಪಂಥಗಳ ಮೂಢನಂಬಿಕೆ ಅಜ್ಞಾನಿಗಳ
ಪುಟ್ಟುವಳಿಯೇ? ಹಾ! ಕಲ್ತು ಬಲ್ತು ಮನಮಥಿಸಿ
ಕಡೆದ ಅರ್ಥಹೀನ-ವಿಚಾರಹೀನ ಕುಮತಿಯ
ಕುತ್ಸಿತ ಪ್ರಸಂಗಮಲ್ತೆ? ಇಂತಪ್ಪ ಪಾಪಮಂ
ಆವ ಪುಣ್ಯತೀರ್ಥ ತೊಳೆದು ಪವಿತ್ರಗೊಳಿಪುದು?
ಹಾ! ಕಂಬನಿಯ ಕೋಡಿಯಂ ಆವ ದೇವಗಣ
ತೊಡೆಯಬಲ್ಲುದು? ಸ್ವಾರ್ಥ-ಸ್ವಾರ್ಥದ ಪರಮಾವಧಿ!
ಸ್ವಸುಖಕೆ ಪರರ ಪ್ರಾಣಹರಣ ಘೋರ ಪಾಪಂ!
ಇದಂ ಅರಿಯದೆ ಮತಪಂಥಗಳ ಕೂರ ಧೋರಣೆ?
ಅರಿತರಿತು ಗೈವ ಹೊಲೆಗತನಂ ಶಂಡಬಂಢ
ಧೈರ್ಯದ ಕಡು ಹೇಯಕೃತ್ಯ! ಘೋರ ಪಾತಕ!
ಅಲ್ಲಿಗೆ ಮುಗಿದುದೇ ಘೋರದುರಂತ ನಾಟಕಂ?

ಸೇನಾ ಕಾರ್ಯಾಚರಣೆ! ಮತ್ತೆ ರಕ್ತಪಾತ!
ಹಾ ! ರಾಷ್ಟ್ರದೊಳಗೆ ಯುದ್ಧರಂಗಕ್ಕೆಡೆಗೊಟ್ಟ
ಅನೀತಿ-ಅಧರ್ಮ-ಅಪವಿತ್ರ ಹಗರಣ ಕೊನೆಗೊಂಡ
ಯುದ್ಧ ಪ್ರಕಾಂಡ! ಅನಿವಾರ್ಯ ರಣ ಪ್ರಕಾಂಡ!!
ಅಲ್ಲಿಗೆ ಮುಗಿದುದೆ ಪ್ರಕರಣ? ಹೀನ ನಿಗೂಢ
ಸಂಚು! ದ್ವೇಷದ ಸಂಚು! ಹತ್ಯಾಕಾಂಡದ ಹೊಂಚು!
ಅಮಾಯಕರಂ ಸಜ್ಜನರಂ ಕೊಲಲ್ ನಡೆದ
ಕೂರ ಸಂಚು! ಘೋರಾತಿಘೋರ ರಕ್ತ ಸಿಂಚನ!
ಇಂದಿನ ಅನನ್ಯ ಅಗ್ರಮಾನ್ಯ ನಾಯಕರಲಿ
ಏಕಮೇವಾದ್ವಿತೀಯ ಮಹಿಳಾ ಪ್ರಧಾನಿ
ಜಗತ್ ಪ್ರಸಿದ್ಧಿವೊಡೆದ ರಾಷ್ಟ್ರೀಯ ನೇತಾರಿಣಿ
ಇಂದಿರಾ ಗಾಂಧಿಯ ಕೊಲೆ! ಕಗ್ಗೊಲೆ!! ದೇಶದ
ಮುನ್ನೆಡೆಗೆ ಶ್ರಮಿಸಿದ ಶ್ರಮದಾನೀ ಮಹಿಳೆ
ಶೋಡಷಕಳಾನಿಧಿಯ ಕೊಲಲ್ ಶೋಡಷ ಗೋಲಿ?
ಮೃದುಲ ಮಹಿಳೆಯ ಕೊಲೆಗೆ ಹದಿನಾರು ಕೆಚ್ಚಿನ
ಸುಡುಗೋಲಿ ಇಕ್ಕುವರೆ?
ತಂದೆಯೆ! ಕಠಿಣಮನಂ
ಇಂತುಕೂರಮೆ ರಕ್ಷಣೆಯ ನೇಮದಲಿ ಭಕ್ಷಣೆ
ಗೈವರೇ? ಇಂತಪ್ಪ ಅರ್ಥಹೀನ ತಥ್ಯಹೀನ ಕುಮತಿ
ದತ್ತ ಮತದ್ವೇಷೋಪನಿಷದ್ವಾಹಿನಿ ಎಂದಿಗೆ
ಕೊನೆಗೊಂಡು ರಾಷ್ಟ್ರಶಾಂತಿ ಸಲ್ವುದೊ? ಭ್ರಾತೃತ್ವ
ಬಂಧುರ ಮಧುರವಾಹಿನಿ ಎಂದಿಗೆ ನಲ್ವರಿದು
ಪರಿವುದೋ? ಅರಿಯದೀ ಮನಃಪ್ರಾಣದ ದೀನ
ಮೊರೆ ಮುಟ್ಟಲಿ ತವಚರಣಂ ಹೇ ಎನ್ನೊಡೆಯಾ!
ಅನಂತರದ ರೊಚ್ಚು ಸಾಮಾನ್ಯಮೆ ಒಡೆಯಾ!
ಯಾರು ತಪಿತಸ್ಥರೋ ಅವರೆಲ್ಲ ತಣ್ಣಗಿರೆ

ನಿರಪರಾಧಿಗಳಂ ಕೊಚ್ಚಿ ಕಂಡರಿಸಿ ಸುಟ್ಟು
ಕರಿಮರಿಗೈದರಲ್ತೆ ನಿಷ್ಕರುಣೆ-ನಿರ್ದಯೆ-
ನಿರ್ಮಮತೆಯೇ ತಾನಾಗಿ!
ಇಂತು ನೊಂದವರ
ನೋಯುವವರ ನೀನೆಂತು ಸೈಪುವೆಯೋ ಎಂತು
ಕಂಬನಿಯ ಕೋಡಿಯಂ ತೊಡೆವೆಯೋ ಅರಿಯೆನೈ
ಪ್ರಾಣನಷ್ಟ-ಜೀವನನಷ್ಟ-ಬಾಂಧವ್ಯನಷ್ಟ-
ದ್ರವ್ಯ ನಷ್ಟ ಎಂತು ಭರಿಸುವೆಯೊ ಒಡೆಯಾ!
ನೀನೆ ಸೂತ್ರಧಾರಿ ಸಹಿಸು ತಂದೆಯೆ ಸಹಿಸು!
ಹಾ, ಈ ಪರಿ ಕಡು ಪಾತಕದ ಸಂಕಟ ಚರಿತ್ರೆ
ಇತಿಹಾಸಕೆ ಶಾಶ್ವತ ಸಾಹಿತ್ಯಮಾಗಿ ಮೇಣ್
ರಚಯತ್ರಿ ವೇನೋದಧಿಗೆ ನೆರೆ ದುಃಖವನೂಡಿ,
ಬರೆಯಲಾರದ ಲೆಕ್ಕಣಿಕೆಯೊತ್ತಿ ಲೇಖಿಸಿರೆ
ಹುರಿದುದೀ ಮಸಿಯೊರತೆ ಸರಳ ಕವನ ರೂಪದಿ
ಕರುಣೆಯ ಕರುಳ ಬಳ್ಳಿಯಂ ಕೊರೆದು ಸೀಳುವೊಲ್!

— ೦ —

# ವಂದನಂ

ಓ! ಜಗನ್ಮಹಾ ಪ್ರಭುವೆ! ನಿನಗೆ ವಂದನಂ.
ಇದೊ ಮತ್ತೆಮತ್ತೆ ವಂದನಂ.
ಪ್ರಮಾಣಪೂರ್ವಕ ವಂದನಂ!
ಕಡು ಕತ್ತಲ ಹಾದಿಯಲಿ ಕೈಬಿಡದೆ ಮುನ್ನಡೆಸಿದ ಪ್ರಭುವೆ,
ನಿನಗೆ ವಿನಮ್ರ ವಂದನಂ.
ನೀನು ಇಲ್ಲೇ ಇರು; ಅಲ್ಲೇ ಇರು; ಎಲ್ಲಾದರೂ ಇರು,
ಎಂತಾದರೂ ಇರು. ಇದೊ, ನಿನಗೆ ಪ್ರಿಯ ವಂದನಂ.
ನೀನು ನರನಾಗಿರು; ಪರನಾಗಿರು; ತಿರೆಯಲ್ಲಾದರೂ ಇರು;
ನಭದಲ್ಲಾದರೂ ಇರು. ಓ ಅಜ್ಞಾತ ಬಂಧುವೆ!
ನಿನಗೆ ಭಕ್ತಿಪೂರ್ವಕ ವಂದನಂ.
ನೀನು ಜ್ಞಾನಿಯಾಗಿರು; ವಿಜ್ಞಾನಿಯಾಗಿರು; ಚಿದ್ಘನನಾಗಿರು;
ಚಿದಾನಂದನೇ ಆಗಿರು! ಮುಂದಾಳಾದ ನಿನಗೆ
ಪುನಃ ಪುನಃ ನಮ್ರವಂದನಂ.
ನೀನು ಹೆಣ್ಣಾಗಿರು; ಗಂಡಾಗಿರು; ತಾಯಿಯೇ ಆಗಿರು!
ನಿನಗೆ ಸಾಷ್ಟಾಂಗ ವಂದನಂ.
ನೀನು ಧನ್ಯನಿರು; ಪುಣ್ಯನಿರು; ಜಡನಿರು; ಚೇತನನಿರು;
ಮಣ್ಣಾಗಿರು; ಕಲ್ಲಾಗಿರು; ಎಂತಾದರೂ ಇರು.
ನಿನಗೆ ಉದ್ದಂಡ ವಂದನಂ.
ಓ ಸೃಷ್ಟಿಬ್ರಹ್ಮನೆ! ಆದಿ-ಅಂತ್ಯಗಳಿಲ್ಲದ ಕಾಲ ಪ್ರಭುವೆ!
ದಿವ್ಯಜ್ಯೋತಿರ್ಧಾರಿಯೂ ಮಹಾಮಹಿಮನೂ ಆದ ನಿನಗೆ
ಹೃತ್ಪೂರ್ವಕ ವಂದನಂ....ವಂದನಂ....ವಂದನಂ!

